# ಅರ್ಥಸಾಧನ



ಎಂ. ವೆಂಕಟಕೃಷ್ಣಯ್ಯನವರಿಂದ

ರಚಿಸಲ್ಪಟ್ಟುದು.



ದ್ವಿತೀಯ ಮುದ್ರಣ 2,000 ಪ್ರತಿಗಳು





MYSORE:

PRINTED AT THE G.T.A. PRESS

1916







ಕ್ರಯ ೮ ಆಣೆ

# ಉಪೋದ್ಘಾತ.

ಪ್ರಪಂಚದಲ್ಲಿ ಅನೇಕಪ್ರಕಾರವಾದ ಗ್ರಂಥಗಳಿರುವುವು. ಈ ಗ್ರಂಥಗಳಲ್ಲಿ ಕೆಲವು ಪ್ರಾಕೃತಿಕವಾದ ಪದಾರ್ಥಗಳ ಗುಣದೋಷಗಳನ್ನು ಬೋಧಿಸತಕ್ಕವುಗಳಾಗಿಯೂ, ಮತ್ತೆ ಕೆಲವು ಪ್ರಾಕೃತಿಕ ಪದಾರ್ಥಗಳ ಸಂಬಂಧದಿಂದ ಮಾನವರ ಶರೀರಕ್ಕೆ ಉಂಟಾಗಬಹುದಾದ ಅಪಾಯವನ್ನೂ ಅಪಾಯ ನಿವಾರಣೋಪಾಯವನ್ನೂ ಬೋಧಿಸತಕ್ಕವುಗಳಾಗಿಯೂ, ಬೇರೆ ಕೆಲವು ಹಿಂದಿನಕಾಲದ ಮಾನವರ ಅಥವಾ ರಾಜರುಗಳ ಚರ್ಯೆಯನ್ನು ಬೋಧಿಸತಕ್ಕವುಗಳಾಗಿಯೂ, ಇನ್ನು ಕೆಲವು ನೀತಿಬೋಧಕವಾಗಿಯೂ, ಕೆಲಕೆಲವು ಇಂದ್ರಜಾಲ ಮಹೇಂದ್ರಜಾಲಾದಿ ಜನಮನೋಮೋಹಕ ವ್ಯಾಪಾರಬೋಧಕಗಳಾಗಿಯೂ, ಕಾವ್ಯನಾಟಕಾದಿಯಾದ ಇತರವಾದ ಕೆಲವು ಗ್ರಂಥಗಳು ಜನಮನೋರಂಜನಪೂರ್ವಕವಾಗಿ ಯತ್ಕಿಂಚಿನ್ನೀತಿ ಬೋಧಕವಾಗಿಯೂ, ಬೇರೆ ಕೆಲವು ಗ್ರಂಥಗಳು ಈ ಜನ್ಮದಲ್ಲಿ ಅನುಭವಕ್ಕೆ ಬಾರದ ಲೋಕಾಂತರ ಸುಖದುಃಖಗಳನ್ನು ತಿಳಿಯಪಡಿಸತಕ್ಕವುಗಳಾಗಿಯೂ, ಮತ್ತೆ ಕೆಲವು ಅವಾಙ್ಮನಸಗೋಚರನಾದ ಭಗವಂತನ ಮಹಿಮೆಯನ್ನು ಬೋಧಿಸತಕ್ಕವುಗಳಾಗಿಯೂ, ಹೀಗೆಯೇ ಇನ್ನೂ ಇತರವಾದ ಗ್ರಂಥಗಳು ಯಾವುದೋ ಒಂದು ಬೇರೆ ವಿಷಯವನ್ನು ಬೋಧಿಸತಕ್ಕವುಗಳಾಗಿಯೂ ಇರುವವೇ ಹೊರತು, ಧನವನ್ನು ಆರ್ಜನೆ ಮಾಡುವ ವಿಷಯವನ್ನೇ ಮುಖ್ಯವಾಗೆಣಿಸಿ ಯಾವ ಗ್ರಂಥವೂ ಕನ್ನಡ ಭಾಷೆಯಲ್ಲಿ ಇರುವಂತೆ ಕಾಣುವುದಿಲ್ಲ.

ಈ ಪ್ರಪಂಚದ ವಿಚಾರವನ್ನು ನೋಡಿದ್ದೇ ಆದರೆ ಔಚಿತ್ಯಾನುಸಾರವಾಗಿಯೂ, ಧರ್ಮಾನುಸಾರವಾಗಿಯೂ, ಇರತಕ್ಕ ಪ್ರಾಪಂಚಿಕಸುಖಭೋಗಗಳನ್ನು ಅನುಭವಿಸಬೇಕಾದರೆ ಧನವಿದ್ದಹೊರತು ತೀರದಾದಕಾರಣ, ಈ ಪ್ರಾಪಂಚಿಕವಾದ ಸುಖವನ್ನು ಅವಶ್ಯವಾಗಿ ಅನುಭವಿಸಬೇಕಾಗಿರುವ

# ಅರ್ಥಸಾಧನ



## ಅರ್ಥ.



ಯಸ್ಯಾರ್ಥಾಸ್ಸ ಮಹಾಭಾಗೋ ಯಸ್ಯಾರ್ಥಾಸ್ಸ ಮಹಾಗುಣಃ |
ಹರ್ಷಃ ಕಾಮಶ್ಚ ದರ್ಪಶ್ಚ ಧರ್ಮಃ ಕ್ರೋಧಶ್ಶಮೋ ದಮಃ ||
ಅರ್ಥಾದೇತಾನಿ ಸರ್ವಾಣಿ ಪ್ರವರ್ತಂತೇ ನರಾಧಿಪ ||

ಧರ್ಮ, ಅರ್ಥ, ಕಾಮ, ಮೋಕ್ಷ ಇವುಗಳು ಪುರುಷಾರ್ಥಗಳೆಂದು ಗಣಿಸಲ್ಪಟ್ಟಿರುವುವು. ಇವುಗಳಲ್ಲೆಲ್ಲಾ ಅರ್ಥವು ಇಹಪರಸೌಖ್ಯಗಳಿಗೆ ಅತ್ಯಂತ ಸಾಧಕವಾದದ್ದು. ಧರ್ಮದಿಂದ ಯಾರು ಅರ್ಥವನ್ನು ಸಂಪಾದಿಸುವರೋ, ಹಾಗೆ ಸಂಪಾದಿಸಿದ ಅರ್ಥವನ್ನು ಯಾರು ಸರಿಯಾಗಿ ರಕ್ಷಿಸಿಕೊಳ್ಳುವರೋ, ಹಾಗೆ ರಕ್ಷಿಸಲ್ಪಟ್ಟ ಅರ್ಥವನ್ನು ಯಾರು ಧರ್ಮದಿಂದಲೂ, ವಿತರಣೆಯಿಂದಲೂ, ಮಿತವ್ಯಯಾಸಕ್ತಿಯಿಂದಲೂ ವ್ಯಯಮಾಡುವರೋ ಅವರು ಈ ಲೋಕದಲ್ಲಿ ಸುಖವಾಗಿರುವುದಲ್ಲದೆ, ಲೋಕಾಂತರದ ಸುಖವನ್ನೂ ಅಪ್ರಯತ್ನಪೂರ್ವಕವಾಗಿ ಹೊಂದುವರು. ಆದುದರಿಂದ ಧನವನ್ನು ಹೇಗೆ ಧರ್ಮದಿಂದ ಆರ್ಜಿಸಬೇಕೋ ಅದನ್ನು ತಿಳಿದುಕೊಳ್ಳುವುದು ಸರ್ವರಿಗೂ ಮುಖ್ಯಕರ್ತವ್ಯವು. ಧನವಂತನು ಕುಲೀನನೆಂಬುದಾಗಿಯೂ, ಚತುರನೆಂಬುದಾಗಿಯೂ, ಸಕಲ ಗುಣಸಂಪನ್ನನೆಂಬುದಾಗಿಯೂ, ವಿದ್ಯಾವಂತನೆಂಬುದಾಗಿಯೂ ಭಾವಿಸಲ್ಪಡುವನು. ದ್ರವ್ಯವಂತನನ್ನು ಸರ್ವರೂ ಆಶ್ರಯಿಸುವರು. ಧನಹೀನನಾದವನು ಸತ್ಕುಲ ಪ್ರಸೂತನಾದಾಗ್ಯೂ, ವಿದ್ಯಾವಂತನಾದಾಗ್ಯೂ, ಸದ್ಗುಣಗಳುಳ್ಳವನಾದಾಗ್ಯೂ ಪೂಜ್ಯ

ನಾಗುವುದು ಕಷ್ಟ. ತಂದೆತಾಯಿಗಳು, ಒಡಹುಟ್ಟಿದವರು, ಹೆಂಡತಿ, ಮಕ್ಕಳು, ಬಂಧುಗಳು, ಸ್ನೇಹಿತರು ಇವರಲ್ಲಿ ಯಾರೂ ಧನಹೀನನನ್ನು ಲಕ್ಷ್ಯಮಾಡುವುದಿಲ್ಲ. ಅನ್ನ ವಸ್ತ್ರಗಳನ್ನು ಸಂಪಾದಿಸಿಕೊಂಡು ಪರಾಧೀನ ರಾಗದೆ ಕೂಡಿದಮಟ್ಟಿಗೂ ಸ್ವತಂತ್ರರಾಗಿ ಬದುಕುವ ಪ್ರಯತ್ನವನ್ನು ಮಾಡುವುದು ಸರ್ವರಿಗೂ ಮುಖ್ಯ ಕರ್ತವ್ಯವು. ಆದುದರಿಂದ ಧನಾರ್ಜನೆಯ ಉಪಾಯಗಳನ್ನು ತಿಳಿದುಕೊಂಡು ಅವುಗಳನ್ನು ಆಚರಣೆಗೆ ತಂದುಕೊಳ್ಳು ವುದು ಸರ್ವರಿಗೂ ಮುಖ್ಯ ಕರ್ತವ್ಯವು. ನಿರ್ಧನನಾದವನ ಮನೋರಥಗಳೆ ಲ್ಲವೂ ಬೇಸಿಗೆಕಾಲದ ತೊರೆಗಳಂತೆ ಶುಷ್ಕವಾಗುವುವು. ಸಮಸ್ತ ದುಃಖ ಗಳಗಿಂತಲೂ ದಾರಿದ್ರ್ಯವು ಅತ್ಯಂತ ದುಸ್ಸಹವಾದದ್ದು. ಆದುದರಿಂದಲೇ ಕುಂತಿಯು ತನ್ನ ಸೊಸೆಯಾದ ಸುಭದ್ರೆಗೆ ಆಶೀರ್ವಾದಮಾಡಿದಾಗ ಭಾಗ್ಯ ವಂತನನ್ನು ಹೆರು ಎಂದು ಹರಸಿದಳು. ಶೂರರಾಗಿಯೂ ಪಂಡಿತರಾಗಿಯೂ ಇದ್ದ ಮಕ್ಕಳನ್ನು ಪಡೆದಾಗ್ಯೂ ತನಗೂ ತನ್ನ ಮಕ್ಕಳಗೂ ವನವಾಸಾದಿ ಕಷ್ಟಗಳು ಪ್ರಾಪ್ತವಾದದ್ದನ್ನು ಸ್ಮರಿಸಿಕೊಂಡು ಕುಂತೀದೇವಿಯು ಈ ರೀತಿಯಲ್ಲಿ ಹರಸಿರಬಹುದು. ದ್ರವ್ಯವು ಸಂತೋಷಕ್ಕೂ, ಇಷ್ಟಾರ್ಥ ಪೂರ್ತಿಗೂ, ದರ್ಪಕ್ಕೂ, ಧರ್ಮಕ್ಕೂ, ಇಹಪರಸಾಧನೆಗಳಿಗೂ ಅತ್ಯಂತ ಸಾಧಕವಾಗುವುದು. ಈ ವಿಷಯಗಳನ್ನು ಪರ್ಯಾಲೋಚಿಸಿ ಎಲ್ಲಾ ವಿದ್ಯಾ ರ್ಥಿಗಳೂ ಧರ್ಮದಿಂದ ಧನವನ್ನು ಆರ್ಜಿಸುವುದನ್ನೂ ಆರ್ಜಿಸಿದ ದ್ರವ್ಯ ವನ್ನು ವ್ಯರ್ಥವಾಗಿ ಕಳೆಯದೆ ಇರುವುದನ್ನೂ ಅತ್ಯಾವಶ್ಯಕವಾದ ವ್ಯಯ ಗಳಿಗೆ ವಿನಿಯೋಗಿಸುವುದನ್ನೂ ತಿಳಿದುಕೊಳ್ಳುವುದು ಆವಶ್ಯಕ. ಈ ವಿಷಯಕ್ಕೆ ವಿದ್ಯಾರ್ಥಿಗಳ ಗಮನವು ಹೇಗೋ ಹಾಗೆ ಇತರರ ಗಮನವೂ ಕೊಡಲ್ಪಡುವುದೆಂದು ನಂಬಿದ್ದೇವೆ.



# ಅದೃಷ್ಟ

ಉತ್ತಮಂ ಸ್ವಾರ್ಜಿತಂ ವಿತ್ತಂ ಮಧ್ಯಮಂ ಪಿತುರಾರ್ಜಿತಂ |
ಅಧಮಂ ಭ್ರಾತೃವಿತ್ತಂ ಚ ಸ್ತ್ರೀವಿತ್ತಮಧಮಾಧಮಂ ||

ಲೋಕದಲ್ಲಿ ಕೆಲವರಿಗೆ ಪ್ರಯತ್ನವಿಲ್ಲದೇಲೆ ಸಂದರ್ಭಗಳ ಸಂಯೋಗದಿಂದ ಹಠಾತ್ತಾಗಿ ಕೆಲವು ಸಂಪತ್ತುಗಳು ಲಭಿಸುವುವು. ಅದನ್ನು ಅದೃಷ್ಟಾಯತ್ತವೆಂದು ಹೇಳುವರು. ಎಲ್ಲರಿಗೂ ಅಂಥಾ ಅದೃಷ್ಟ ಪ್ರಾಪ್ತಿಯುಂಟಾಗುವುದಿಲ್ಲವೆಂಬುವುದು ಅನುಭವಸಿದ್ಧವಾಗಿಯೇ ಇದೆ. ಅದೃಷ್ಟ ಪ್ರಾಪ್ತಿಯಿಂದುಂಟಾಗುವುದೆಂದು ಯಾವುದನ್ನು ಹೇಳುತ್ತಾರೆಯೋ ಅದೂ ಕೂಡ ದೇಶ ಕಾಲ ಸಂದರ್ಭ ಸಂಯೋಜನಗಳಿಂದುಂಟಾಗುವುದು. ಹೀಗಿರುವಾಗ ನಮಗೆ ಒಳ್ಳೇ ಅದೃಷ್ಟ ಬರುವುದೆಂದು ಅನುದ್ಯೋಗಿಗಳಾಗಿರುವುದು ಕ್ಷೇಮವಾದುದಲ್ಲ. ಕೆಲವರಿಗೆ ಅದೃಷ್ಟವಶದಿಂದ ಸಂಪತ್ತುಗಳು ಉಂಟಾದಾಗ್ಯೂ ಅನೇಕರಿಗೆ ಪುರುಷಕಾರದಿಂದಲೇ ಅವುಗಳುಂಟಾಗುವುವು. ಅದೃಷ್ಟವಶದಿಂದ ಪ್ರಾಪ್ತವಾದದ್ದು ಶಾಶ್ವತವಾಗಿ ನಿಲ್ಲಲಾರದು. ಏಕೆಂದರೆ :—ಸುಲಭವಾಗಿ ಲಭ್ಯವಾದದ್ದು ಸುಲಭವಾಗಿಯೇ ಪರಾಧೀನವಾಗುವುದು. ನಾವು ಮಾಡುವ ಪ್ರಯತ್ನದಿಂದುಂಟಾಗುವ ಸಂಪತ್ತುಗಳು ಬೇಗ ಕ್ಷೀಣದಶೆಗೆ ಬರುವುದು ಅಪೂರ್ವ. ನಿರಾಯಾಸವಾಗಿ ಪ್ರಾಪ್ತವಾದ ಧನವನ್ನು ಧಾರಾಳವಾಗಿ ವೆಚ್ಚಮಾಡುವುದಕ್ಕೆ ಮನಸ್ಸು ಒಡಂಬಡುವಂತೆ ಕಷ್ಟಾರ್ಜಿತವಾದ ಧನವನ್ನು ವೆಚ್ಚಮಾಡುವುದಕ್ಕೆ ಮನಸ್ಸು ಒಡಂಬಡುವುದಿಲ್ಲ. ಅದೃಷ್ಟವಶದಿಂದ ಪ್ರಾಪ್ತವಾಗುವ ಸಂಪತ್ತಿಗಿಂತಲೂ ಪ್ರಯತ್ನದಿಂದ ಆರ್ಜಿಸಲ್ಪಡತಕ್ಕ ಧನವೇ ಉತ್ತಮವಾದದ್ದು. ಈ ವಿಷಯದಲ್ಲಿ ನಮ್ಮ ಹಿರಿಯರು "ಸ್ವಶಕ್ತಿಯಿಂದ ಸಂಪಾದನೆ ಮಾಡಿದಂಥಾದ್ದು ಉತ್ತಮವಾದದ್ದು, ತಂದೆಯಿಂದ ಪ್ರಾಪ್ತವಾದಂಥಾದ್ದು ಮಧ್ಯಮವಾದದ್ದು, ಸಹೋದರ ಸಂಬಂಧಿ

ಯಾದಂಥಾದ್ದು ಅಥವುವಾದದ್ದು. ಸ್ತ್ರೀಯರ ಸಂಬಂಧಿಯಾದಂಥಾದ್ದು ಅಥವಾಧವುವಾದದ್ದು" ಎಂಬುದಾಗಿ ಹೇಳಿದ್ದಾರೆ. ಆದುದರಿಂದ ಸಮಸ್ತರೂ ಅದೃಷ್ಟವಿದ್ದಹಾಗೆ ಆಗಲೆಂದು ಅನುದ್ಯೋಗರಾಗಿರದೆ ಪ್ರಯತ್ನಗಳನ್ನು ಮಾಡಬೇಕು.



## ಪುರುಷಕಾರ.

ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀರ್ದೈವಂ ಪ್ರಮಾಣಮಿತಿ ಕಾಪುರುಷಾವದನ್ತಿ| ದೈವಂ ನಿಹತ್ಯ ಕುರು ಪೌರುಷಮಾತ್ಮಶಕ್ತ್ಯಾ ಯತ್ನೇ ಕೃತೇ ಯದಿ ನ ಸಿದ್ಧ್ಯತಿ ಕೋತ್ರ ದೋಷಃ ||

ಉದ್ಯೋಗಸ್ಸಾಹಸಂ ಧೈರ್ಯಂ ಬುದ್ಧಿಃ ಶಕ್ತಿಃ ಪರಾಕ್ರಮಃ |
ಷಡೇತೇ ಯಸ್ಯ ತಿಷ್ಠನ್ತಿ ತಸ್ಯ ದೇವೋಪಿ ಶಂಕತೇ ||

ಸಮಸ್ತ ಕೆಲಸಗಳಿಗೂ ಪ್ರಯತ್ನವು ಕೇವಲ ಸಾಧಕವಾದದ್ದು. ಸರಿಯಾದ ಪ್ರಯತ್ನವಿಲ್ಲದಿದ್ದರೆ ಯಾವ ಕಾರ್ಯವೂ ಫಲಿಸುವುದಿಲ್ಲ. ಫಲಗಳು ಪ್ರಯತ್ನಕ್ಕನುಸಾರವಾಗಿರುವುವು, ಉದ್ಯೋಗಿಗೆ ಪ್ರಯತ್ನಕ್ಕನುಗುಣವಾದ ಫಲವುಂಟಾಗುವುದು. ಅನುದ್ಯೋಗಿಗೆ ಫಲರಾಹಿತ್ಯದ ಜೆತೆಗೆ ಅನರ್ಥಗಳೂ ಉಂಟಾಗುವುವು. ಆದರೆ ಇಷ್ಟಾರ್ಥಗಳು ಅದೃಷ್ಟಾಯತ್ತವೆಂದು ನಂಬಿ ಅನೇಕರು ಅನುದ್ಯೋಗಿಗಳಾಗಿರುವರು. ಹೀಗಿದ್ದದ್ದಕ್ಕೋಸ್ಕರ ಪರಿಣಾಮದಲ್ಲಿ ಇಂಥವರು ವಿಶೇಷ ಅನುತಾಪವನ್ನು ಪಡುವರು. ಪುರುಷಕಾರ್ಯೈಕಪರಾಯಣರಾದವರಿಗೆ ಉಂಟಾಗತಕ್ಕ ಲಕ್ಷ್ಮೀಪ್ರಸನ್ನತೆಯನ್ನು ನೋಡಿ ತಾವು ಸರಿಯಾದ ಕಾಲದಲ್ಲಿ ಪುರುಷಕಾರವನ್ನವಲಂಬಿಸಲಿಲ್ಲವಲ್ಲಾ ಎಂಬುದಾಗಿ ಅನೇಕರು ಪರಿತಪಿಸುವರು. ಅಂಥವರು ಕೆಟ್ಟಮೇಲೆ

ಹೀಗೆ ಪರಿತಪಿಸುವರಾದ್ದರಿಂದ ಆ ಪಶ್ಚಾತ್ತಾಪವು ಅವರಿಗೆ ವಿಶೇಷ ಪ್ರಯೋಜನಕಾರಿಯಾಗುವುದಿಲ್ಲ. ಅದೃಷ್ಟವಿದ್ದಂತೆ ಆಗಲೆಂದು ಅನುದ್ಯೋಗಿಗಳಾಗಿದ್ದವರು ಶೋಚನೀಯವಾದ ಸ್ಥಿತಿಗೆ ಬಂದಿರುವುದೂ ಈಗ ಬರುತ್ತಲಿರುವುದೂ ಅನುಭವಸಿದ್ಧವಾಗಿಯೇ ಇರುವುವು. ಸರಿಯಾದ ಪ್ರಯತ್ನವನ್ನೇ ಮಾಡಿ ಪುರುಷಕಾರವನ್ನೇ ನಂಬಿ ನಡೆಯುವುದರಲ್ಲಿ ಕೆಟ್ಟುಹೋಗಿರುವವರು ಬಹಳ ಅಪೂರ್ವರಾಗಿರುತ್ತಾರೆ. ಒಂದುವೇಳೆ ಅಂಥವರು ಇದ್ದಾರೆಂದು ಗೊತ್ತಾದಾಗ್ಯೂ ಅವರು ಮಾಡಿದ ಪ್ರಯತ್ನಗಳನ್ನು ಪರಿಶೀಲಿಸಿದರೆ ಅವುಗಳಲ್ಲಿ ಕಾರ್ಯಸಾಧನೆಗೆ ಪ್ರತಿಕೂಲವಾದ ಕೆಲವು ನ್ಯೂನತೆಗಳು ಗೊತ್ತಾಗುತ್ತವೆ. ಆದುದರಿಂದಲೇ “ಲಕ್ಷ್ಮಿಯು ಉದ್ಯೋಗಿಯಾದ ಪುರುಷಶ್ರೇಷ್ಠನನ್ನು ಹೊಂದುತ್ತಾಳೆ. ತಿಳಿವಳಿಕೆಯಿಲ್ಲದವರು ದೈವವೇ ಕಾರಣನೆಂಬುದಾಗಿ ಹೇಳುವರು. ದೈವವನ್ನು ಅಪೇಕ್ಷಿಸದೆ ಪುರುಷ ಪ್ರಯತ್ನಗಳನ್ನು ಮಾಡು. ಪ್ರಯತ್ನ ಮಾಡಿದರೂ ಒಂದುಸಲ ಸಿದ್ಧಿಸದೆ ಹೋದರೆ ಆ ವಿಷಯದಲ್ಲಿ ದೋಷವೇನಿಗೆ? ಮತ್ತು ಪ್ರಯತ್ನ, ಸಾಹಸ, ಧೈರ್ಯ, ಬುದ್ಧಿ, ಶಕ್ತಿ, ಪರಾಕ್ರಮ ಈ ಆರು ಗುಣಗಳು ಯಾರಲ್ಲಿರುವುವೋ ಅವರಿಗೆ ದೈವವೂ ಕೂಡ ಹೆದರುತ್ತದೆ. ಅಂದರೆ ಅಂಥಾ ಸಾಹಸಾದಿ ಗುಣಗಳುಳ್ಳವರಲ್ಲಿ ನನ್ನ ಯತ್ನವು ನಡೆಯುವುದೋ ಇಲ್ಲವೋ ಎಂಬುದಾಗಿ ದೇವರು ಕೂಡ ಶಂಕಿಸುತ್ತಾನೆ.” ಎಂದು ನೀತಿಶಾಸ್ತ್ರಜ್ಞರು ಹೇಳಿದ್ದಾರೆ. ಆದಕಾರಣ ಸರ್ವರೂ ಹಣೆಯಲ್ಲಿ ಬರೆದಂತೆ ಆಗಲೆಂದು ಪ್ರಯತ್ನ ಪರಾಙ್ಮುಖರಾಗದೆ ತಮ್ಮ ಯೋಗ್ಯತೆಗೆ ಅನುರೂಪವಾದ ಪ್ರಯತ್ನಗಳನ್ನು ಕಲ್ಪಿಸಿಕೊಂಡು ಅದರಲ್ಲಿ ವೃದ್ಧಿಗೆ ಬರುವುದಕ್ಕೆ ತಕ್ಕ ಸನ್ನಾಹಗಳನ್ನು ಮಾಡುವುದರಲ್ಲಿ ಯಾವಾಗ್ಯೂ ಪುರುಷಕಾರ್ಯೈಕಪರಾಯಣರಾಗಿರಬೇಕು.



## ಐಕಾಗ್ರ್ಯ.

ಸರ್ವದಾ ಸರ್ವಸಂಸ್ಥೇನ ಸರ್ವೇಣ ಸಹ ತಿಷ್ಠತಾ ।
ಸರ್ವಕರ್ಮರತಂ ಸ್ವಸ್ಥಂ ಮನಃ ಕಾರ್ಯಂ ವಿಜಾನತಾ ॥

ನಮ್ಮ ಪೂರ್ವಿಕರಾದ ಮಹರ್ಷಿಗಳು ಇಷ್ಟಾರ್ಥಪ್ರಾಪ್ತಿಗೋಸ್ಕರ ಆಹಾರ ನಿದ್ರಾದಿಗಳನ್ನು ನಿರಾಕರಿಸಿ ದೇಹದಂಡನಪೂರ್ವಕವಾಗಿ ಐಕಾಗ್ರ್ಯದಿಂದ ನಾನಾವಿಧವಾದ ತಪಸ್ಸುಗಳನ್ನು ಮಾಡಿ ತಮ್ಮ ಇಷ್ಟಾರ್ಥಗಳನ್ನು ಸಾಧಿಸುತಿದ್ದ ವಿಷಯಗಳು ಪುರಾಣೇತಿಹಾಸಗಳಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುವು. ಅವುಗಳನ್ನು ಪರಿಶೀಲಿಸಿ ನೋಡಿದರೆ ಅವರು ತಮ್ಮ ಮನೋರಥಗಳನ್ನು ಸಾಧಿಸುವುದಕ್ಕಾಗಿ ಉಪಕ್ರಮಿಸಿದ ತಪಸ್ಸೇ ಮೊದಲಾದುವುಗಳನ್ನು ಎಷ್ಟು ವಿಘ್ನಗಳು ಬಂದಾಗ್ಯೂ ಹಿಂಜರಿಯದೆ ಐಕಾಗ್ರ್ಯದಿಂದ ಮಾಡುತ್ತಿದ್ದಂತೆ ತಿಳಿಯಬರುತ್ತದೆ. ಅದರಂತೆ ನಾವು ಹಿಡಿದ ಕೆಲಸವನ್ನು ಸ್ಥೈರ್ಯದಿಂದ ಸಾಧಿಸಬೇಕು. ಪ್ರಯೋಜನಾಂಶವನ್ನು ಪಡೆಯಬೇಕೆಂಬ ಅಪೇಕ್ಷೆಯುಳ್ಳವರು ಉಪಕ್ರಮಿಸಿದ ಕೆಲಸವನ್ನು ತದೇಕಾಯತ್ತಚಿತ್ತರಾಗಿ ಮಾಡಬೇಕು. ಹಾಗೆ ಮಾಡದೆ ಅನೇಕ ಕೆಲಸಗಳನ್ನು ಏಕಕಾಲದಲ್ಲಿ ಉಪಕ್ರಮಿಸುವುದು, ಮಾಡುವ ಕೆಲಸದಲ್ಲಿ ಮನಸ್ಸನ್ನು ನಿಶ್ಚಲವಾಗಿ ನಿಲ್ಲಿಸದೆ ಚಪಲಚಿತ್ತರಾಗುವುದು, ಅಥವಾ ಉಪಕ್ರಮಿಸಿದ ಕೆಲಸವನ್ನು ಮುಗಿಸುವುದರೊಳಗಾಗಿ ಮನಸ್ಸನ್ನು ಕಾರ್ಯಾಂತರದಲ್ಲಿ ಬಿಟ್ಟು ಮೊದಲು ಉಪಕ್ರಮಿಸಿದ ಕೆಲಸದಲ್ಲಿ ಐಕಾಗ್ರ್ಯವನ್ನು ಕಡಿಮೆ ಮಾಡುವುದು ಇವುಗಳೆಲ್ಲಾ ಪ್ರಯತ್ನಿಸಿದ ಕಾರ್ಯದಲ್ಲಿ ಸಮಗ್ರವಾದ ಐಕಾಗ್ರ್ಯಕ್ಕೆ ಅವಕಾಶವಿಲ್ಲದೆ ಮಾಡುವುದರಿಂದ ಆ ಕಾರ್ಯಗಳಿಗುಂಟಾಗತಕ್ಕ ಉತ್ತರಫಲವು ಅತೃಪ್ತಿಕರವಾಗಿ ಆಗುವುದರಲ್ಲಿ ಸಂಶಯವಿಲ್ಲ. ಲೋಕದಲ್ಲಿ ಅನೇಕ ವಿದ್ಯಾರ್ಥಿಗಳು ಅನೇಕ ಭಾಗಗಳಲ್ಲಿ ಪಾಂಡಿತ್ಯವನ್ನು ಸಂಪಾ

ದಿಸಬೇಕೆಂದು ಚಾಂಚಲ್ಯದಿಂದ ಅನೇಕ ಮಾರ್ಗಗಳಲ್ಲಿ ಪ್ರವರ್ತಿಸಿ ಬಂದ ರಲ್ಲಾದರೂ ಸಮಗ್ರವಾದ ಶಕ್ತಿಯನ್ನೂ ಅರ್ಥಪ್ರಾಪ್ತಿಗೆ ಸಾಧಕವಾದ ಯೋಗ್ಯತೆಯನ್ನೂ ಹೊಂದದೆ ಹೋಗುವರು. ಧನಾರ್ಥಿಗಳಾದ ಅನೇಕರು ಹೀಗೆಯೇ ಯಾವದಾದರೂ ಒಂದು ವೃತ್ತಿಯಲ್ಲಿ ರೂಢಮೂಲವಾದ ಜ್ಞಾನ ವನ್ನು ಸಂಪಾದಿಸಿಕೊಳ್ಳದೆ ಚಪಲಚಿತ್ತತೆಯಿಂದ ಅನೇಕ ವೃತ್ತಿಗಳನ್ನವ ಲಂಬಿಸಿ ಬಂದರಲ್ಲಾದರೂ ಪಾರೀಣತೆಯನ್ನು ಹೊಂದದೆ ಭಗ್ನಮನೋರಥ ರಾಗುವರು. ಆದುದರಿಂದ ಪುರುಷಾರ್ಥಗಳಲ್ಲಿ ಯಾವುದನ್ನು ಹೊಂದಬೇ ಕಾದರೂ ಯೋಚನೆಯಿಲ್ಲದೆ ಅನೇಕ ಮುಖವಾಗಿ ಹೊರಡಕೂಡದು. ಚೆನ್ನಾಗಿ ವಿಮರ್ಶೆ ಮಾಡಿ ತನ್ನ ಶಕ್ತಿಗೂ ಬುದ್ಧಿಗೂ ಅನುರೂಪವಾದ ವೃತ್ತಿಯನ್ನು ಗೊತ್ತುಮಾಡಿಕೊಂಡು ಅದನ್ನು ಎಡೆಬಿಡದೆ ಐಕಾಗ್ರ್ಯದಿಂದ ಆಚರಿಸುತ್ತಾ ಬರಬೇಕು. ಹೀಗೆ ಮಾಡಿದ ಕೆಲಸವು ಫಲದಾಯಕ ವಾಗುವುದು.

## ಪೂರ್ವಾಪರಜ್ಞತೆ.

———

ಕಿಂ ನು ಮೇ ಸ್ಯಾದಿದಂ ಕೃತ್ವಾ ಕಿಂ ನು ಮೇ ಸ್ಯಾದಕುರ್ವತಃ |
ಇತಿ ನಿಶ್ಚಿತ್ಯ ಮನಸಾ ಪ್ರಾಜ್ಞಃ ಕುರ್ವೀತ ವಾ ನ ವಾ ||

ಧನಾರ್ಜನೆಗೂ, ಧನ ರಕ್ಷಣೆಗೂ ಪೂರ್ವಾಪರಗಳನ್ನು ಯೋಚಿಸಿ ಕೆಲಸಮಾಡುವುದು ಅತ್ಯಾವಶ್ಯಕವಾದದ್ದು. ಪೂರ್ವಾಪರ ಯೋಚನೆಗಳಿಲ್ಲದೆ ಮಾಡಿದ ಕೆಲಸಗಳು ಫಲದಾಯಕವಾಗುವುದು ಅಪೂರ್ವ. ಪ್ರಾಯಶಃ ನಾವು ಉಪಕ್ರಮಿಸತಕ್ಕ ಕಾರ್ಯಗಳಿಗೆ ಏನೇನು ಸಂಭವಿಸಬಹುದಾಗಿರು ವುದೋ ಅವುಗಳನ್ನು ಕಾಲ ದೇಶ ವರ್ತಮಾನಗಳ ಸಹಾಯದಿಂದ ತಿಳದು ಕೊಂಡು ಅವಕ್ಕೆ ಪ್ರತಿಕೂಲವಾದ ಸಂದರ್ಭಗಳುಂಟಾಗುವ ಪಕ್ಷದಲ್ಲಿ ಅವುಗಳ ಪರಿಹಾರಕ್ಕಾಗಿ ಮಾಡಬೇಕಾದ ಪ್ರಯತ್ನಗಳನ್ನು ಮಾಡುವುದ

ರಲ್ಲಿ ಜಾಗರೂಕರಾಗಿರಬೇಕಲ್ಲದೆ, ಕೊನೆಗೆ ಅದು ಫಲಪ್ರದವಾಗಬಹು ದೆಂದು ತೋರಿವ ಹೊರತು ಯಾವ ಕೆಲಸವನ್ನೇ ಆಗಲಿ ಉಪಕ್ರಮಿಸಬಾ ರದು. ಪೂರ್ವದಲ್ಲಿ ಒಬ್ಬ ಮಹಾತ್ಮನು ದೇಶಗಳನ್ನೆಲ್ಲಾ ಸಂಚರಿಸುತ್ತಾ ಒಂದು ಕೋಟಿ ದ್ರವ್ಯವನ್ನು ಕೊಟ್ಟರೆ ಒಂದು ಬುದ್ಧಿವಾದವನ್ನು ಹೇಳು ವೆನೆಂದು ಧನಿಕರನ್ನು ಕುರಿತು ಹೇಳುತ್ತಾ ಇದ್ದನು. ಅನೇಕರು ಈ ಬುದ್ಧಿವಾದವು ಎಂಥಾದ್ದಾಗಿರಬಹುದೋ ಎಂಬುದಾಗಿ ಆಶ್ಚರ್ಯಪಡುತ್ತಾ ಇದ್ದರು. ಕಡೆಗೆ ಒಬ್ಬ ದೊರೆಯು ಇದನ್ನು ಪರೀಕ್ಷಿಸಬೇಕೆಂದು ಆತನಿಗೆ ಒಂದು ಕೋಟಿ ದ್ರವ್ಯವನ್ನು ಕೊಟ್ಟು ಬುದ್ಧಿವಾದವನ್ನು ಕೇಳಿದನು. ಆ ಮಹಾತ್ಮನು ಧೊರೆಯನ್ನು ಏಕಾಂತಸ್ಥಳಕ್ಕೆ ಕರೆದುಕೊಂಡುಹೋಗಿ "ಎಲೈ ಧೊರೆಯೇ ನಾನು ಹೇಳುವ ಬುದ್ಧಿವಾದವು ಸಾಮಾನ್ಯವಾದುದೆಂದು ಉಪೇಕ್ಷಿಸಬೇಡ. ಅದನ್ನು ಚೆನ್ನಾಗಿ ಪರೀಕ್ಷಿಸು ; ಎಂದು ಹೇಳಿ, ನೀನು ಮಾಡತಕ್ಕ ಕೆಲಸಗಳ ಪರಿಣಾಮದ ಫಲವನ್ನು ಚೆನ್ನಾಗಿ ತಿಳಿದುಕೊಳ್ಳದೆ ಯಾವ ಕೆಲಸವನ್ನೂ ಮಾಡಬೇಡ" ಎಂದು ಹೇಳಿದನು. ಧೊರೆಯು ಈ ಮಾತನ್ನು ಕೇಳಿದ ಕೂಡಲೇ ಇದು ಎಲ್ಲರಿಗೂ ತಿಳಿದಮಾತೇ ಎಂಬುದಾಗಿ ಭಾವಿಸಿ ಈ ಸಂಗತಿಯು ಎಲ್ಲರಿಗೂ ತಿಳಿದರೆ "ಧೊರೆಯು ಮೋಸಹೋದ ನೆಂದು ಪರಿಹಾಸಮಾಡುವರು" ಎಂಬುದಾಗಿ ಯೋಚಿಸಿಕೊಂಡು ಅನ್ಯಾದೃ ಶವಾದ ಬುದ್ಧಿವಾದದ ಉಪದೇಶವನ್ನು ಹೊಂದಿದವನಂತೆ ಅಭಿನಯಿಸಿ, ಆ ಮಹಾತ್ಮನಿಗೆ ಮರ್ಯಾದೆಮಾಡಿ ಕಳುಹಿಸಿಕೊಟ್ಟನು. ಆ ಮೇಲೆ ಧೊರೆ ಯು ತನಗೆ ಹೇಳಿದ ಬುದ್ಧಿವಾದದ ವಚನವನ್ನು ಅರಮನೆಯ ಸಮಸ್ತಭಾಗ ಗಳಲ್ಲಿಯೂ ನೋಡಿದಕಡೆ ಕಾಣುವಂತೆ ಬರೆಸಿದನು. ಕೆಲವು ದಿವಸ ಗಳಲ್ಲಿ ಈತನಿಗೆ ಶತ್ರುವಾದ ಸಾಮಂತರಾಜನೊಬ್ಬನು ಪ್ರತೀಕಾರಬುದ್ಧಿ ಯಿಂದ ಈತನ ಪ್ರಾಣವನ್ನೂ ರಾಜ್ಯವನ್ನೂ ಅಪಹರಿಸಬೇಕೆಂದು ಈ ಧೊರೆಗೆ ಕ್ಷೌರಮಾಡುವವನನ್ನು ಕರೆಸಿ "ನೀನು ಕ್ಷೌರಮಾಡುವಾಗ

ನಿಮ್ಮ ದೊರೆಯ ಶಿರಚ್ಛೇದನವನ್ನು ಮಾಡು; ನಿನಗೆ ವಿಪತ್ತು ಬಂದರೆ ನಾನು ನಿನ್ನನ್ನು ರಕ್ಷಿಸುತ್ತೇನೆ," ಎಂಬದಾಗಿ ಹೇಳಿ ಬಹುದ್ರವ್ಯವನ್ನು ಕೊಟ್ಟು ಕಳುಹಿಸಿದನು. ಆ ನಾಪಿತನು ಈ ಧನಕ್ಕಾಗಿ ಆಸೆಪಟ್ಟು ಸ್ವಾಮಿ ಹತ್ಯಮಾಡುವುದೇ ಸರಿ ಎಂಬದಾಗಿ ಮನಸ್ಸಿನಲ್ಲಿ ಸಂಕಲ್ಪಮಾಡಿಕೊಂಡು ಅರಮನೆಗೆ ಹೋದನು. ಅಲ್ಲಿ ದೊರೆಯನ್ನು ನೋಡಿದಕೂಡಲೆ ಆ ನಾಪಿತ ನಿಗೆ ಭಯವುಂಟಾಯಿತು. ಆದರೂ ಅವನು ಆ ಭಯವನ್ನು ನಿಗ್ರಹಿಸಿ ಕೊಂಡು ಮುಂಡನವನ್ನು ಮಾಡುವುದಕ್ಕೆ ಸನ್ನಾಹಮಾಡಿಕೊಳ್ಳುತ್ತಾ, ಏನೇ ಆಗಲಿ ಈದಿವಸ ವಪನಮಾಡುವಾಗ ದೊರೆಯನ್ನು ಕೊಲ್ಲುವುದೇ ಸರಿ ಎಂದು ಯೋಚಿಸಿಕೊಂಡು, ದೊರೆಯ ಮುಂದಕ್ಕೆ ಹೋದನು. ಅಲ್ಲಿ ತನಗೆ ಅಭಿಮುಖವಾಗಿದ್ದ ಗೋಡೆಯ ಮೇಲೆ 'ನೀನು ಮಾಡತಕ್ಕ ಕೆಲಸಗಳ ಪರಿಣಾಮಫಲಗಳನ್ನು ಚೆನ್ನಾಗಿ ತಿಳಿದುಕೊಳ್ಳದೆ ಯಾವ ಕೆಲಸವನ್ನೂ ಮಾಡಬೇಡ,' ಎಂದು ಬರೆದಿದ್ದ ಲೇಖನವನ್ನು ಓದಿಕೊಂಡನು. ಕೂಡಲೆ ತಾನು ನೆನೆಸಿದ್ದ ದುಷ್ಕೃತ್ಯದಿಂದ ತನಗಾಗತಕ್ಕ ವಿಪತ್ಪರಂಪರೆಗಳು ಮನ ಸ್ಸಿಗೆ ಗೋಚರವಾಗಲು ಅವನಿಗೆ ಕೈಕಾಲುಗಳು ನಡುಗುವದಕ್ಕುಪಕ್ರಮ ವಾಯಿತು. ಯಾವಾಗಲೂ ಇಲ್ಲದ ಈ ನಾಯಿಂದನ ವಿಕಾರಗಳನ್ನು ನೊಡಿದಕೂಡಲೆ ದೊರೆಯು ಅವನನ್ನು ಹಿಡಿದುಕೊಂಡು ಕ್ಷೌರದ ಕತ್ತಿ ಯನ್ನು ಕಿತ್ತುಕೊಂಡು ಅವನು ಹೀಗೆ ಭಯಪಡಲು ಕಾರಣವನ್ನು ವಿಚಾರಿ ಸಿದನು. ಆಗ ಭಯದಿಂದ ನಡುಗುತ್ತಿರುವ ನಾಪಿತನು "ಮನೆಯನ್ನು ಕಟ್ಟಬಹುದು, ಮನಸ್ಸನ್ನು ಕಟ್ಟಲಾಗದು" ಎಂದು ಹೇಳುವ ಮಾತು ಸತ್ಯ, ಮಾಡತಕ್ಕದ್ದೇನು, ಎಂದು ಮನಸ್ಸನ್ನು ಗಟ್ಟಿಮಾಡಿಕೊಂಡು, ನಡೆದ ವೃತ್ತಾಂತವನ್ನೆಲ್ಲಾ ದೊರೆಗೆ ಅರಿಕೆಮಾಡಿ, ದ್ರವ್ಯದ ಆಸೆಯಿಂದುಂಟಾದ ಅಪರಾಧವನ್ನು ಕ್ಷಮಿಸಬೇಕೆಂದು ಅಡ್ಡಬಿದ್ದನು. ದೊರೆಯು ತಾನು ಹಿಂದೆ ಹಿತೋಪದೇಶಕ್ಕೋಸ್ಕರ ಮಹಾತ್ಮನಿಗೆ ಕೊಟ್ಟ ಕೋಟಿದ್ರವ್ಯವು ಶತಗುಣ

ವಾಗಿ ತನಗೆ ಈ ದಿವಸ ಬಂದಹಾಗಾಯಿತೆಂದು ಭಾವಿಸಿಕೊಂಡು, ಈ ತಂತ್ರ ವನ್ನು ಮಾಡಿದ ಸಾಮಂತರಾಜನನ್ನು ಹಿಡಿದು ದಂಡಿಸಿ, ಧನದ ಆಸೆಗೆ ಒಳ ಪಟ್ಟ ನಾಪಿತನನ್ನು ಗಡೀಪಾರುಮಾಡಿಸಿದನು.

ಯೋಚಿಸಿ ಕೆಲಸಗಳನ್ನು ಮಾಡುವುದರಿಂದ ವಿಸತ್ಪರಂಪರೆಗಳು ತಪ್ಪುವುವಲ್ಲದೆ ವಿಶೇಷವಾಗಿ ಲಾಭವೂ ಆಗುವುದು. ದ್ರವ್ಯದ ಆರ್ಜನೆ ಯನ್ನೂ ಆಮೇಲೆ ಅದರ ರಕ್ಷಣೆಯನ್ನೂ ಮಾಡತಕ್ಕವರು ಪರಿಣಾಮ ದಲ್ಲುಂಟಾಗತಕ್ಕ ಲಾಭ ನಷ್ಟಗಳನ್ನು ಪೂರ್ವಭಾವಿಯಾಗಿಯೇ ಯೋಚಿ ಸುವುದು ಅತ್ಯಂತ ಆವಶ್ಯಕವಾದದ್ದು.

## ಅನಾಲಸ್ಯ.

ಆಲಸ್ಯಂ ಯದಿ ನ ಭವೇಜ್ಜಗತ್ಯನರ್ಥಃ
ಕೋ ನ ಸ್ಯಾದ್ಬಹುಧನಕೋ ಬಹುಶ್ರುತೋ ವಾ |
ಆಲಸ್ಯಾದಿಯಮವನಿಸ್ಸಸಾಗರಾನ್ತಾ
ಸಂಪೂರ್ಣಾ ನರಪಶುಭಿಶ್ಚ ನಿರ್ಧನೈಶ್ಚ ||

ಮಾಡಬೇಕಾದ ಕೆಲಸಗಳನ್ನು ಆಲಸ್ಯಪಡದೆ ಸರಿಯಾದ ಕಾಲದಲ್ಲಿ ಮಾಡುವುದು ಧನಾರ್ಜನೆಗೂ ಧನರಕ್ಷಣೆಗೂ ಅತ್ಯಾವಶ್ಯಕವಾದದ್ದು. ಕೃಷಿ, ವಾಣಿಜ್ಯ, ವಿದ್ಯಾರ್ಜನೆ ಮೊದಲಾದುವುಗಳಲ್ಲೆಲ್ಲಾ ಆಲಸ್ಯಮಾಡಿದರೆ ದುರ್ನಿವಾರವಾದ ತೊಂದರೆಗಳು ಬರುವುದು ಅನುಭವಸಿದ್ಧವಾಗಿಯೇ ಇದೆ. ಹದವಾದ ಮಳೆಯಾದಾಗ ಉಳುವುದು, ಬಿತ್ತುವುದು, ಹರಗಣೆಹೊಡೆಯು ವುದು, ಕಳೆಕೀಳುವುದು, ಕುಯಿಲಿಗೆ ಬಂದಾಗ ಹದವರಿತು ಕುಯ್ಯುವುದು ಇವೇಮೊದಲಾದ ಕೆಲಸಗಳಲ್ಲಿ ಆಲಸ್ಯಪಡುವವರಿಗೆ ವ್ಯವಸಾಯದ ಫಲವು ಕೈಗೂಡುವುದೆ? ಧಾನ್ಯ ಜವುಳಿ ಮೊದಲಾದ ವ್ಯಾಪಾರದ ಸರುಕುಗಳನ್ನು

ಕೊಂಡುಕೊಳ್ಳುವುದರಲ್ಲೂ ಕೊಡುವುದರಲ್ಲಿಯೂ ಪೂರ್ವಾಪರಜ್ಞತೆಯಿಲ್ಲದೆ ಆಲಸ್ಯಪಡುವ ವ್ಯಾಪಾರಗಾರರಿಗೆ ಸರಿಯಾದ ಲಾಭ ಬರುವುದೆ? ಓದುವುದು ಬರೆಯುವುದು ಮೊದಲಾದುವುಗಳಲ್ಲಿ ಕಾಲದೇಶಗಳ ನಡೆವಳಿಕೆಗಳನ್ನು ನೋಡಿಕೊಂಡು ತಿಳಿವಳಿಕೆಯಿಂದ ನಡೆಯದೆ ಆಲಸ್ಯಪಡುವ ವಿದ್ಯಾರ್ಥಿಗಳಿಗೆ ವಿದ್ಯೆ ಬರುವುದೆ? ಹೀಗೆ ಆಲಸ್ಯಪಡುವವರಿಗೆ ಸಮಸ್ತ ಕಾರ್ಯಗಳಲ್ಲೂ ನಷ್ಟವುಂಟಾಗಿಯೇ ಆಗುವುದು.

ಆಲಸ್ಯದಿಂದ ಅಮೃತವೂ ಕೂಡ ವಿಷವಾಗುವುದೆಂಬುದು ಅನುಭವಸಿದ್ಧವಾದ ಮಾತು. ಹೀಗಿದ್ದರೂ ಅನೇಕರು "ಸ್ವಲ್ಪ ಹೊತ್ತಾದಮೇಲೆ ಮಾಡೋಣ; ನಾಳೆ ಮಾಡೋಣ" ಎಂದು, ಮಾಡತಕ್ಕ ಕೆಲಸಗಳ ಯೋಚನೆಯೇ ಇಲ್ಲದೆ ಕಾಲಹರಣಮಾಡುವರು. ಇದು ಯುಕ್ತವಲ್ಲ. ಮಾಡತಕ್ಕ ಕೆಲಸಗಳನ್ನು ಸರಿಯಾದ ಕಾಲದಲ್ಲಿ ಮಾಡಿ, ಪ್ರಾರಂಭಿಸಿದ ಕೆಲಸ ಮುಗಿದ ಮೇಲೆ ಉಳಿದ ವಿರಾಮಕಾಲದಲ್ಲಿ ಇಷ್ಟಬಂದಂತೆ ನಡೆಯುವುದುತ್ತಮವು. ಮಾಡತಕ್ಕ ಕೆಲಸಗಳಲ್ಲಿ ಯಾವುದು ಪ್ರಯೋಜನಕರವಾಗಿರುವುದೋ ಅದನ್ನು ಮನಃಪೂರ್ವಕವಾಗಿ ಮಾಡದಿದ್ದರೆ ಅದರ ಫಲವು ಸಿಕ್ಕುವುದಿಲ್ಲ. ಪ್ರಾರಂಭಿಸಿದ ಕೆಲಸವನ್ನು ಶ್ರದ್ಧೆಯಿಂದ ಮಾಡತಕ್ಕವರು ಪ್ರಯೋಜನವನ್ನು ಹೊಂದಿ ಐಶ್ವರ್ಯವಂತರಾಗುತ್ತಾರೆ. ತಾವು ಮಾಡತಕ್ಕ ಕೆಲಸದ ಸಂಪೂರ್ಣಫಲವನ್ನು ಪಡೆಯಬೇಕೆಂಬ ಕುತೂಹಲವುಳ್ಳವರಿಗೆ ಕೆಲಸದ ಮೇಲೆ ನಿರಂತರ ದೃಷ್ಟಿಯೂ ಜಾಗರೂಕತೆಯೂ ಇದ್ದೇಇರಬೇಕು.



## ಸಾಹಸ.

ಪ್ರಾರಭ್ಯತೇ ನ ಖಲು ವಿಘ್ನಭಯೇನ ನೀಚೈಃ
ಪ್ರಾರಭ್ಯ ವಿಘ್ನನಿಹತಾವಿರಮನ್ತಿ ಮಧ್ಯಾಃ |
ವಿಘ್ನೈರ್ಮುಹುರ್ಮುಹುರಪಿ ಪ್ರತಿಹನ್ಯಮಾನಾಃ
ಪ್ರಾರಬ್ಧಮುತ್ತಮಗುಣಾನ ಪರಿತ್ಯಜನ್ತಿ ||

ಯಾರು ಪೂರ್ವಾಪರಗಳನ್ನು ಯೋಚಿಸಿ ಹಿಡಿದ ಕೆಲಸವನ್ನು ಫಲೋದಯವಾಗುವವರೆಗೂ ಜಾಗರೂಕತೆಯಿಂದ ತಮ್ಮ ಶಕ್ತಿಯನ್ನೆಲ್ಲಾ ವಿನಿಯೋಗಿಸಿ ಮಾಡುವರೋ ಅವರೇ ಸಾಹಸಿಗಳೆನ್ನಿಸಿಕೊಳ್ಳುವರು. ಸಾಹಸದಿಂದ ಮಾಡದಿರುವ ಕೆಲಸಗಳು ಸಿದ್ಧಿಸುವುದು ಕಷ್ಟ. ಯಾವ ಮನುಷ್ಯನು ಕೆಲಸವನ್ನು ಉಪಕ್ರಮಿಸಿ ಚಪಲಚಿತ್ತನಾಗದೆ ಮನಸ್ಸನ್ನೆಲ್ಲಾ ಕೆಲಸದಮೇಲಿಟ್ಟು ನಿರಂತರದಲ್ಲೂ ಕ್ರಮತಪ್ಪದೆ ಸಾಹಸದಿಂದ ಮಾಡುತ್ತಾನೋ ಅವನು ಮಾಡುವ ಕೆಲಸವು ಫಲದಾಯಕವಾಗುವುದು. ಹಾಗಲ್ಲದೆ ಒಂದು ಕೆಲಸವನ್ನುಪಕ್ರಮಿಸಿ ಅದನ್ನು ಮುಗಿಸುವುದಕ್ಕೆ ಮುಂಚೆಯೇ ಮತ್ತೊಂದು ಕೆಲಸದಲ್ಲಿ ವಿಶೇಷ ಪ್ರಯೋಜನವಾಗುವುದೆಂದು ಮೊದಲು ಹಿಡಿದಿದ್ದುದನ್ನು ಬಿಟ್ಟು ಎರಡನೆಯದನ್ನು ಅವಲಂಬಿಸತಕ್ಕವನು ಯಾವ ಕಾರ್ಯವನ್ನೂ ಸಾಧಿಸಲಾರನು. ಅಂಥ ಮನುಷ್ಯನು ಯಾವ ಕೆಲಸವನ್ನು ಮಾಡುವುದಕ್ಕೂ ಅರ್ಹನಾಗುವುದಿಲ್ಲ.

ಸಾಹಸಿಗಳು ತಾವು ಆರಂಭಿಸತಕ್ಕ ಕಾರ್ಯವನ್ನು ಮೊದಲೇ ಪರ್ಯಾಲೋಚಿಸಿಕೊಂಡು ಸ್ಥೈರ್ಯದಿಂದುಪಕ್ರಮಿಸುವರು. ಉಪಕ್ರಮಿಸಿದಮೇಲೆ ಎಷ್ಟು ವಿಘ್ನಗಳು ಬಂದರೂ ಹಿಂಜರಿಯದೆ ಅವುಗಳನ್ನು ಪರಿಹಾರಮಾಡಿಕೊಂಡು ಕಾರ್ಯಸಿದ್ಧಿಯಾಗುವವರೆಗೂ ಉತ್ಸಾಹದಿಂದ ಕೆಲಸಮಾಡುವರು. ಉಪಕ್ರಮಿಸಿದ ಕೆಲಸವನ್ನು ನಿರ್ವಹಿಸುವುದರಲ್ಲಿ ಅನಿವಾರ್ಯವಾದ ವಿಘ್ನ

ಪರಂಪರೆಗಳು ಬಂದರೂ ಅವುಗಳನ್ನು ನಿವಾರಣೆಮಾಡಿಕೊಳ್ಳುವುದರಲ್ಲಿ ತಮ್ಮ ಸರ್ವಪ್ರಯತ್ನಗಳನ್ನೂ ಮಾಡಿ ತಾವು ಹಿಡಿದ ಕಾರ್ಯವನ್ನು ಸಾಧಿಸುವರು. ಆ ಕಾರ್ಯವು ಕೈಗೂಡದಪಕ್ಷದಲ್ಲಿ ಅದನ್ನು ಸಾಧಿಸತಕ್ಕ ಪ್ರಯತ್ನದಲ್ಲಿಯೇ ಯಾವಜ್ಜೀವವೂ ನಿರತರಾಗಿರುವರು. ಅನ್ಯಾದೃಶವಾದ ಸ್ಥೈರ್ಯದಿಂದ ಕೆಲಸವನ್ನುಪಕ್ರಮಿಸಿ ಸಾಧಿಸತಕ್ಕವರು ವಿರಳರಾಗಿರುತ್ತಾರೆ. ಯಾರಿಗೆ ಇಂಥ ಸ್ಥೈರ್ಯವೂ ಸಾಹಸವೂ ಇರುವುದಿಲ್ಲವೋ ಅವರೇ ವಿಘ್ನಗಳಿಗೆ ಅಂಜಿ ಹಿಡಿದ ಕಾರ್ಯವನ್ನು ಸಾಧಿಸದೆ ಅದರ ಫಲವನ್ನೂ ಕಳೆದುಕೊಳ್ಳುವರು. ಒಬ್ಬನು ಪ್ರಯತ್ನಪೂರ್ವಕವಾಗಿ ಸಾಧಿಸಿದ ಕೆಲಸವನ್ನು ಮತ್ತೊಬ್ಬನು ಕಾಲ ದೇಶ ವರ್ತಮಾನಗಳಿಗನುಸಾರವಾದ ಪ್ರಯತ್ನಗಳಿಂದ ಸಾಧಿಸಿಯೇಸಾಧಿಸುವನು. ಹೇಗೆಂದರೆ :—

ನೆಪೋಲಿಯನ್‌ಬೊನೊಪಾರ್ಟೆಂಬವನು ಒಂದು ಸಾಧಾರಣವಾದ ಕುಟುಂಬದಲ್ಲಿ ಜನಿಸಿದನು. ಇವನು ಧೈರ್ಯ ಸ್ಥೈರ್ಯ ಸಾಹಸಾದಿ ಗುಣಗಳನ್ನೂ ಅನ್ಯಾದೃಶವಾದ ವೈದುಷ್ಯವನ್ನೂ ಸಂಪಾದಿಸಿದ್ದನಲ್ಲದೆ ಹಿಡಿದ ಕೆಲಸಗಳಲ್ಲೆಲ್ಲ ಅಸಾಧಾರಣವಾದ ಸಾಹಸವನ್ನೂ ತೋರಿಸುತ್ತಬಂದನು. ಇದರಿಂದ ಇವನು ಕ್ರಮಕ್ರಮವಾಗಿ ಫ್ರೆಂಚ್‌ದೇಶದ ಚಕ್ರವರ್ತಿಪದವಿಗೂ ಬಂದನು. ಇವನು ಯೂರೋಪ್ ಖಂಡದಲ್ಲಿರತಕ್ಕ ದೇಶಗಳನ್ನೆಲ್ಲ ಜಯಿಸಿ ತನ್ನ ಬಂಧು ಮಿತ್ರರುಗಳಿಗೆಲ್ಲ ಒಂದೊಂದನ್ನು ಕೊಟ್ಟನು. ಆಗ ಸ್ಪೇನ್‌ದೇಶದ ದೊರೆತನದಲ್ಲಿದ್ದ ಜೋಸಫ್ ಎಂಬ ಇವನ ಸಹೋದರನು ರಾಜ್ಯಭಾರ ಮಾಡುವುದಕ್ಕೆ ಸಾಕಾದಷ್ಟು ಸಾಹಸವಿಲ್ಲದೆ ಆಗಾಗ್ಗೆ ಇವನ ಸಹಾಯವನ್ನಪೇಕ್ಷಿಸುತ್ತಿದ್ದನು. ಒಂದುಸಲ ನೆಪೋಲಿಯನನು ಸಹಾಯ ಮಾಡುವವಿಷಯದಲ್ಲಿ ಉಪೇಕ್ಷೆಮಾಡಿದಾಗ ಜೋಸಫನು "ನನಗೆ ಶತ್ರುಗಳು ಪ್ರಬಲವಾದರು. ನೀನು ಬೇಗ ಸಹಾಯಮಾಡದಿದ್ದಪಕ್ಷದಲ್ಲಿ ಅವರನ್ನು ಜಯಿಸುವುದು ನನಗೆ ಅಸಾಧ್ಯವಾಗುವುದು ಅವರು ನನ್ನನ್ನು ಕೊಂದು

ರಾಜ್ಯವನ್ನಪಹರಿಸಿಕೊಳ್ಳುವರು. ನನಗೋಸ್ಕರ ಕಟ್ಟಲ್ಪಟ್ಟ ಗದ್ದಿಗೆಯು ನಿನ್ನ ದೌರ್ಬಲ್ಯವನ್ನು ಪ್ರಕಟಿಸುವುದು," ಎಂಬುದಾಗಿ ತನ್ನ ಅಣ್ಣನಿಗೆ ಬರೆದುಕಳುಹಿಸಿದನು. ಅದಕ್ಕೆ ನೆಪೋಲಿಯನನು "ನೀನು ಸಾಹಸಿಯೆಂದು ಭಾವಿಸಿ ರಾಜ್ಯಭಾರ ಮಾಡುವುದಕ್ಕೋಸ್ಕರ ನಿನಗೆ ಒಂದು ದೇಶವನ್ನು ಕೊಟ್ಟೆನು. ರಾಜ್ಯಭಾರ ಮಾಡುವುದಕ್ಕೆ ಬೇಕಾದ ಗುಣಾತಿಶಯಗಳು ನಿನ್ನಲ್ಲಿ ಇಲ್ಲವೆಂದು ನೀನೇ ಪ್ರಕಟಿಸಿಕೊಂಡಿದ್ದೀಯೆ. ಹೀಗೆ ಧೈರ್ಯ ಸ್ಥೈರ್ಯ ಸಾಹಸಾದಿಗಳಿಲ್ಲದೆ ಬದುಕುವುದಕ್ಕಿಂತ ಸಾಯುವುದೇ ಮೇಲು. ಯಾರು ಉಪಕ್ರಮಿಸಿದ ಕೆಲಸಗಳನ್ನು ಮಾಡಲಾರದೆ ಇದು ನನಗೆ ಅಸಾಧ್ಯವೆಂದು ಹೇಳುತ್ತಾರೆಯೋ ಅಂಥವರಿಗೆ ನಾನು ಸಹಾಯಮಾಡುವುದಿಲ್ಲವೆಂದು ನಿಷ್ಕರ್ಷೆಮಾಡಿದ್ದೇನೆ,' ಎಂಬುದಾಗಿ ಪ್ರತ್ಯುತ್ತರವನ್ನು ಕೊಟ್ಟದ್ದಲ್ಲದೆ ತದಾರಭ್ಯ ಅಸಾಧ್ಯವೆಂಬ ಶಬ್ದವು ನಿಘಂಟುಗಳಲ್ಲಿಯೂ ಇರಕೂಡದೆಂದು ವಿಧಿಮಾಡಿದನು. ಇದನ್ನು ನೋಡಿ ಅವನ ಪರಿವಾರದವರು ಅವನು ಎಂಥ ಕಾರ್ಯಗಳನ್ನು ಹೇಳಿದರೂ ಅಸಾಧ್ಯವೆಂದು ಹೇಳದೆ ಅವನ್ನು ಸಾಧಿಸುತ್ತಿದ್ದರು. ಹಾಗೆ ಸಾಧಿಸುವುದಕ್ಕಾಗದಿದ್ದಪಕ್ಷದಲ್ಲಿ ಆ ಕಾರ್ಯವನ್ನು ಸಾಧಿಸತಕ್ಕ ಪ್ರಯತ್ನದಲ್ಲಿ ಪ್ರಾಣವನ್ನಾದರೂ ಒಪ್ಪಿಸುತ್ತಿದ್ದರು. ಅವನ ಸೈನ್ಯಾಧಿಪತಿಗಳೂ ಸೈನಿಕರೂ ಎಲ್ಲರೂ ಧೈರ್ಯ ಸ್ಥೈರ್ಯ ಸಾಹಸಗಳಲ್ಲಿ ಅವನಿಗನುರೂಪವಾಗಿದ್ದರು. ಯೂರೋಪ್‌ಖಂಡದಲ್ಲಿರತಕ್ಕ ಎಲ್ಲಾ ದೇಶದವರಿಗೂ ಅವನ ಹೆಸರನ್ನು ಕೇಳಿದಮಾತ್ರದಿಂದಲೇ ಜಂಘಾಬಲ ತಪ್ಪುತಿತ್ತು. ಅವನ ಸೈನಿಕರ ಹೆಸರನ್ನು ಕೇಳಿದರೂ ಅದೇರೀತಿಯಾಗಿ ಆಗುತಿತ್ತು. ಆದುದರಿಂದ ವೃದ್ಧಿಗೆ ಬರತಕ್ಕವರು ಅಪ್ರತಿಹತವಾದ ಸಾಹಸವುಳ್ಳವರಾಗಿರಬೇಕು.



# ಸತ್ಯ.

ಸತ್ಯೇನ ಪ್ರಾಪ್ಯತೇ ಲಕ್ಷ್ಮೀಃ ಸತ್ಯೇನ ಪ್ರಾಪ್ಯತೇ ಸುಖಂ |
ಸತ್ಯೇನ ಪ್ರಾಪ್ಯತೇ ಸ್ವರ್ಗಃ ಸತ್ಯಾನ್ನಾಸ್ತಿ ಮಹತ್ತರಂ ||

ಸತ್ಯವು ಪರಬ್ರಹ್ಮಸ್ವರೂಪವು. ಅದರಲ್ಲಿ ಸಮಸ್ತಧರ್ಮಗಳೂ ಅಡಕವಾಗಿರುವುವು. ಸತ್ಯವೇ ನಿತ್ಯವಾದ ವೇದಗಳು. ಅದರಿಂದ ಉತ್ತಮ ಲೋಕವು ಹೊಂದಲ್ಪಡುತ್ತದೆ. ಸತ್ಯವನ್ನವಲಂಬಿಸಿದರೆ ಪರಬ್ರಹ್ಮನನ್ನು ಅವಲಂಬಿಸಿದಂತೆಯೂ, ಸಕಲವೇದಗಳನ್ನೂ ಪಠನೆಮಾಡಿ ಅವುಗಳ ಅರ್ಥವನ್ನು ತಿಳಿದು ವೇದೋಕ್ತಧರ್ಮಗಳನ್ನೆಲ್ಲ ಆಚರಿಸಿದಂತೆಯೂ ಆಗುವುದು. ಸತ್ಯವನ್ನು ಬಿಟ್ಟರೆ ಈ ಮೂರನ್ನೂ ಪರಿತ್ಯಜಿಸಿದಂತಾಗುವುದಾದಕಾರಣ ಸತ್ಯವು ಸರ್ವವರ್ಣಸಾಧಾರಣವಾದ ಧರ್ಮವಾಗಿರುವುದು. ಸತ್ಪುರುಷರಲ್ಲಿ ಸತ್ಯವು ಸ್ಥಿರವಾಗಿಯೂ ನಿತ್ಯವಾಗಿಯೂ ಇರುವುದು. ಸತ್ಯದ ಮಹಿಮೆಯನ್ನು ಕಂಡವರೇ ಇಲ್ಲ. ಲೋಕದಲ್ಲಿ ಸತ್ಯಕ್ಕೆ ಸರಿಯಾದ ಮತ್ತೊಂದು ಧರ್ಮವಿಲ್ಲ. ಸಾವಿರ ಅಶ್ವಮೇಧಯಜ್ಞಗಳ ಫಲಗಳನ್ನೂ ಸತ್ಯವನ್ನೂ ತಕ್ಕಡಿಯಲ್ಲಿ ಹಾಕಿ ತೂಗಿದಾಗ ಸತ್ಯವೇ ಹೆಚ್ಚು ಭಾರವುಳ್ಳುದಾಗಿ ಕಾಣಬಂದಿತೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆ. ಸತ್ಯವು ಅತ್ಯಂತಪ್ರಧಾನವಾದುದೆಂದು ನಿಷ್ಕರ್ಷೆಮಾಡಲ್ಪಟ್ಟಿದೆ. ವೇದಗಳಲ್ಲಿ ಸತ್ಯವನ್ನೇ ನುಡಿಯಬೇಕೆಂದು ಹೇಳಲ್ಪಟ್ಟಿದೆ. ಸತ್ಯವಂತನ ಮಾತನ್ನು ಎಲ್ಲರೂ ಗೌರವಿಸುವರು. ಸತ್ಯವು ಪರಬ್ರಹ್ಮಸ್ವರೂಪವೆಂದು ಗೊತ್ತಾಗಿರುವುದರಿಂದಲೇ ಸರ್ಕಾರದವರು ವಿಚಾರಣೆಮಾಡುವಾಗ ಸತ್ಯವಾಗಿ ಹೇಳುವೆನೆಂದು ಮೊದಲು ಹೇಳಿಸಿ, ಅನಂತರ ವಾಙ್ಮೂಲವನ್ನು ತೆಗೆದುಕೊಳ್ಳುವರು. ಪೂರ್ವಾಪರ ಜ್ಞಾನವಿಲ್ಲದವರು ಅಲ್ಪಲಾಭದಮೇಲಣ ದೃಷ್ಟಿಯಿಂದ ಸತ್ಯವನ್ನು ಬಿಟ್ಟು ನಡೆದು ಕಾಲಕ್ರಮವಾಗಿ ನಿರ್ಗತಿಕರಾಗುತ್ತಲಿರುವುದು ಅನುಭವಸಿದ್ಧವಾ

ಗಿಯೇ ಇದೆ. ವಿಪತ್ತಿನ ಕಾಲದಲ್ಲಿ ಕೂಡ ಸತ್ಯಕ್ಕಿಂತಲೂ ದೊಡ್ಡದಾದ ಅವಲಂಬನವು ಯಾವುದೂ ಇಲ್ಲ.

ಜರ್ಮನಿದೇಶದಲ್ಲಿ ೧೮೦೦ ನೇ ಇಸವಿಯಲ್ಲಿ ರಾತ್ಸ್‌ಚೈಲ್ಡೆಂಬ ಒಬ್ಬ ವರ್ತಕನು ಒಂದು ಸಾಧಾರಣವಾದ ಅಂಗಡಿಯನ್ನಿಟ್ಟುಕೊಂಡಿದ್ದನು. "ನಾಲಗೆವಾಸಿಯಿದ್ದವನ ಮಾತು ಹಾಲಿಗಿಂತ ಹೆಚ್ಚು" ಎಂಬಂತೆ ಅವನು ಬಡವನಾಗಿದ್ದರೂ ಅಸತ್ಯವನ್ನು ನುಡಿಯತಕ್ಕವನಲ್ಲವೆಂದು ಅವನ ಪರಿಚಯವುಳ್ಳವರೆಲ್ಲರೂ ನಂಬಿದ್ದರು. ಫ್ರೆಂಚ್‌ದೇಶದ ಚಕ್ರವರ್ತಿಪದವಿಗೆ ಬಂದ ನೆಪೋಲಿಯನ್ನೆಂಬವನು ಜರ್ಮನಿದೇಶದ ಚಕ್ರವರ್ತಿಯನ್ನು ಸೋಲಿಸಿ ಆ ರಾಜಧಾನಿಯನ್ನು ಕೊಳ್ಳೆಹೊಡೆಯುವುದಕ್ಕೋಸ್ಕರ ತನ್ನ ಸೈನ್ಯದೊಡನೆ ಪ್ರವೇಶಮಾಡಿದನು. ಆಗ ಜರ್ಮನ್ ಚಕ್ರವರ್ತಿಯು ತನ್ನ ಆಸ್ತಿಯಲ್ಲಿ ಅಮೂಲ್ಯವಾದ ವಸ್ತುಗಳನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ಹಾಕಿ ತೆಗೆದುಕೊಂಡು ರಾತ್ಸ್‌ಚೈಲ್ಡೆಂಬ ವರ್ತಕನ ಮನೆಗೆ ಏಕಾಂತವಾಗಿ ಬಂದು "ಇದನ್ನು ನೀನು ಭದ್ರವಾಗಿಟ್ಟುಕೊಂಡಿದ್ದು, ನಾನು ಪ್ರಾಣಸಹಿತನಾಗಿ ಬಂದರೆ ನನಗೆ ಕೊಡು" ಎಂಬುದಾಗಿ ಹೇಳಿ ಅದನ್ನು ಅವನ ಕೈಗೆ ಕೊಟ್ಟನು. ಅದಕ್ಕೆ ಆ ವರ್ತಕನು "ಸ್ವಾಮಿ, ಇದನ್ನು ಭದ್ರವಾಗಿ ನೋಡಿಕೊಳ್ಳುವುದು ನನ್ನಿಂದ ಅಸಾಧ್ಯ" ಎಂಬುದಾಗಿ ಬಹುಬಗೆಯಲ್ಲಿ ಅರಿಕೆಮಾಡಿಕೊಂಡರೂ ಚಕ್ರವರ್ತಿಯು ಕೇಳದೆ, ನೆಪೋಲಿಯನೆಂಬವನು ಪುರಪ್ರವೇಶಮಾಡಿದನೆಂಬುದನ್ನು ಕೇಳಿ, ಆ ಕ್ಷಣವೇ ಆ ಪೆಟ್ಟಿಗೆಯನ್ನು ಅಲ್ಲಿ ಬಿಟ್ಟುಬಿಟ್ಟು ಪ್ರಾಣರಕ್ಷಣೆಗಾಗಿ ಓಡಿಹೋದನು. ಒಡನೆಯೇ ದೂರದೃಷ್ಟಿಯುಳ್ಳ ಆ ವರ್ತಕನು ಆ ಪೆಟ್ಟಿಗೆಯನ್ನು ತನ್ನ ಹಿತ್ತಲಿಗೆ ತಗೆದುಕೊಂಡುಹೋಗಿ ಅಲ್ಲಿ ಒಂದು ಗುಂಡಿಯಲ್ಲಿ ಅದನ್ನು ಹೂತು ಅದರಮೇಲೆ ಒಂದು ಗಿಡವನ್ನು ನೆಟ್ಟು ಬಂದನು. ನೆಪೋಲಿಯನನು ಆ ಪಟ್ಟಣವನ್ನು ಕೊಳ್ಳೆಹೊಡೆದಮೇಲೆ, ಜರ್ಮನ್ ಚಕ್ರವರ್ತಿಯು ರಾತ್ಸ್‌ಚೈಲ್ಡೆಂಬ ವರ್ತಕನ

ಮನೆಗೆ ಬಂದಿದ್ದನೆಂದು ತಿಳಿದು, ಒಡನೆಯೇ ಬಂದು ಇವನ ಮನೆಯನ್ನು ಶೋಧಿಸಿ, ಈ ವರ್ತಕನು ಸಂಪಾದಿಸಿಕೊಂಡಿದ್ದ ಅಲ್ಪ ಸ್ವಲ್ಪ ದ್ರವ್ಯವನ್ನೆಲ್ಲ ತೆಗೆದುಕೊಂಡು ಹೊರಟುಹೋದನು. ೧೮೧೫ ನೇ ಇಸವಿಯಲ್ಲಿ ವಾಟರ್ಲೂ ಎಂಬ ಸ್ಥಳದಲ್ಲಿ ನಡೆದ ಯುದ್ಧದಲ್ಲಿ ನೆಪೋಲಿಯನ್ ಎಂಬವನು ಸೋತು ರಾಜ್ಯಭ್ರಂಶವನ್ನು ಹೊಂದಿದಮೇಲೆ ಈ ರಾತ್ಸ್‌ಚೈಲ್ಡೆಂಬ ವರ್ತಕನು ಆ ಪೆಟ್ಟಿಗೆಯನ್ನು ತೆಗೆದು ಅದರಲ್ಲಿದ್ದ ದ್ರವ್ಯವನ್ನೂ ಜವಾಹಿರಿಗಳನ್ನೂ ಮೂಲಧನವಾಗಿಟ್ಟುಕೊಂಡು ವ್ಯಾಪಾರಮಾಡುವುದಕ್ಕೆ ಪಕ್ರಮಿಸಿದನು. ನಾಲ್ಕೈದು ವರ್ಷಗಳೊಳಗಾಗಿ ಬಂಡವಾಳವಾಗಿಟ್ಟುಕೊಂಡಿದ್ದ ಕೋಟ್ಯಂತದ್ರವ್ಯವು ಅವನ ಶಕ್ತಿಯಿಂದ ಬಹಳವಾಗಿ ಹೆಚ್ಚಿತು. ಇದಕ್ಕೆಲ್ಲಾ ಕ್ರಮವಾಗಿ ಲೆಕ್ಕವನ್ನಿಟ್ಟು ತನ್ನ ಜೀವನಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾತ್ರವೇ ತೆಗೆದುಕೊಳ್ಳುತಿದ್ದನು. ಆಮೇಲೆ ಚಕ್ರವರ್ತಿಯು ರಾಜಧಾನಿಗೆ ಬಂದು ರಾತ್ಸ್‌ಚೈಲ್ಡೆಂಬ ವರ್ತಕನ ಮನೆಗೆ ಹೇಳಿಕಳುಹಿಸಲು, ಆ ವರ್ತಕನು 'ನಾಮವಿದ್ದರೂ ಸಂಬಿಕೆಯಿರಬೇಕು' ಎಂಬಂತೆ ತಾನು ಮೊದಲಿನಿಂದ ಕ್ರಮವಾಗಿಟ್ಟಿದ್ದ ಲೆಕ್ಕವನ್ನೂ ಅದುವರೆಗೆ ವೃದ್ಧಿಮಾಡಿರತಕ್ಕ ಧನವನ್ನೂ ತೆಗೆದುಕೊಂಡುಹೋಗಿ ಒಪ್ಪಿಸಿ, ನೆಪೋಲಿಯನನು ತನ್ನಿಂದ ತೆಗೆದುಕೊಂಡುಹೋದ ದ್ರವ್ಯವನ್ನುಮಟ್ಟಿಗೆ ತನಗೆ ಮೂಲಧನವಾಗಿ ಕೊಡಿಸಿದರೆ ಸಾಕೆಂದು ಚಕ್ರವರ್ತಿಯಲ್ಲಿ ಅರಿಕೆಮಾಡಿಕೊಂಡನು. ಆ ಚಕ್ರವರ್ತಿಯು ಇವನ ಸತ್ಯವನ್ನು ನೋಡಿ ಆಶ್ಚರ್ಯಪಟ್ಟು ಅವನು ವೃದ್ಧಿಮಾಡಿದ ಧನವನ್ನೆಲ್ಲಾ ಅವನಿಗೇ ಕೊಟ್ಟು ತಾನು ಕೊಟ್ಟಿದ್ದಷ್ಟನ್ನು ಮಾತ್ರ ತಾನು ತೆಗೆದುಕೊಂಡದ್ದಲ್ಲದೆ, ಯೂರೋಪ್‌ಖಂಡದಲ್ಲಿರತಕ್ಕ ಎಲ್ಲಾರಾಜರಿಗೂ ವರ್ತಕರಿಗೂ ಈ ವರ್ತಕನ ಸತ್ಯಸಂಧತ್ವವನ್ನು ಅತ್ಯಂತ ಅಭಿಮಾನದಿಂದ ತಿಳಿಸಿದನು. ಆಮೇಲೆ ಈ ವರ್ತಕನ ವ್ಯಾಪಾರವು ದಿನದಿನಕ್ಕೆ ವಿಶೇಷವೃದ್ಧಿಗೆ ಬಂದಿತು. ಈಗಲೂ ಈ ವರ್ತಕನ ಸಂತತಿಯವರು

ಲಂಡನ್ ಪಟ್ಟಣದಲ್ಲಿ ಇದ್ದಾರೆ. ಅವರಿಗೆ ಒಂದು ಮಿನೀಟಿಗೆ ಒಂದು ಸಾವಿರ ರೂಪಾಯಿಗಳಿಗೆ ಕಡಿಮೆಯಿಲ್ಲದೆ ಆದಾಯ ಬರುತ್ತಲಿದೆ. ಸತ್ಯವಾಗಿ ನಡೆಯತಕ್ಕವರೆಲ್ಲರೂ ಸ್ವಲ್ಪ ಹೆಚ್ಚು ಕಡಿಮೆಯಾಗಿ ಈರೀತಿ ವೃದ್ಧಿಗೆ ಬರುವುದರಲ್ಲಿ ಸಂಶಯವಿಲ್ಲ. ಆದುದರಿಂದ ಧನಾರ್ಜನೆ ಧನರಕ್ಷಣೆಗಳನ್ನು ಮಾಡಬೇಕೆಂಬ ಕುತೂಹಲವುಳ್ಳವರು ಸತ್ಯವನ್ನು ಎಂದಿಗೂ ಬಿಡಬಾರದು.

---

## ಅನೃತ.

ಅಸತ್ಯಮಪ್ರತ್ಯಯಮೂಲಕಾರಣಂ
ಕುವಾಸನಾಸದ್ಮ ಸಮೃದ್ಧಿವಾರಣಂ |
ವಿಪನ್ನಿದಾನಂ ಪರವಂಚನೋರ್ಜಿತಂ
ಕೃತಾಪರಾಧಂ ಕೃತಿಭಿರ್ವಿವರ್ಜಿತಂ ||

ವಾಸ್ತವವನ್ನು ಹೇಳದಿರುವುದೇ ಅನೃತ (ಸುಳ್ಳು) ವೆನ್ನಿಸಿಕೊಳ್ಳುವುದು. ಸುಳ್ಳಾಡುವುದು ಬಹಳ ಕೆಟ್ಟದ್ದು. ಇದು ಮನುಷ್ಯನ ನಂಬಿಕೆಯನ್ನು ಕೆಡಿಸಿಬಿಡುವುದು. ಸುಳ್ಳು ಹೇಳುವ ದುರಭ್ಯಾಸವು ನೆಲೆಗೊಂಡುಬಿಟ್ಟರೆ, ಆಮೇಲೆ ಪ್ರತಿಯೊಂದು ವಿಷಯದಲ್ಲಿಯೂ ಸುಳ್ಳು ನೆಪಗಳನ್ನು ಹೇಳುವುದು ಬಳಿಕೆಯಾಗುವುದು. ಒಂದುಸಲ ಇಂಥವನು ಸುಳ್ಳು ನೆಪಗಳನ್ನು ಹೇಳುತ್ತಾನೆಂದು ಜನಗಳಿಗೆ ತಿಳಿದರೆ ಆಮೇಲೆ ಅವನನ್ನು ಯಾರೂ ನಂಬುವುದಿಲ್ಲ. ಕೊನೆಗೆ ಇದರಿಂದ ಅವನ ಹೆಸರುವಾಸಿಯು ಕೆಡುವುದು. ಅನೃತವಾದಿಯನ್ನು ಕಂಡರೆ ಜನರು ಸರ್ಪವನ್ನು ಕಂಡಂತೆ ಭಯಪಡುತ್ತಾರೆ. ವೇದಗಳಲ್ಲೂ ಕೂಡ ಸುಳ್ಳನ್ನಾಡಬಾರದೆಂದು ವಿಧಿಯಿರುವುದು. ಇದಲ್ಲದೆ ಕೆಲವುಜನ ಸಾಲಗಾರರು, ಜೂಜುಗಾರರು, ಅಪೇಯಪಾನ ಅಗಮ್ಯಾಗಮ

ನಗಳನ್ನು ಮಾಡತಕ್ಕವರು—ಇವರ ಜನ್ಮವೆಲ್ಲಾ ಸುಳ್ಳಿನ ಮುದ್ದೆಯಾಗಿ ಪರಿಣಮಿಸುವುದು. ಸುಳ್ಳಿನಿಂದ ಘನತೆಯು ಹೋಗುವುದು. ಘನತೆತಪ್ಪಿದವನು ಬದುಕಿದರೂ ವ್ಯರ್ಥವು. ಆದಕಾರಣ ಯಾವವಿಧವಾಗಿಯೂ ಸುಳ್ಳಾಡುವುದನ್ನು ಬಿಟ್ಟಲ್ಲಿ ಅಂಥವನಿಗೆ ಸಕಲ ವಿಷಯಗಳಲ್ಲೂ ಒಳ್ಳೆಯದಾಗುವುದು.



## ನಡತೆ.

ಆಚಾರಾಲ್ಲಭತೇ ಹ್ಯಾಯುಃ ಆಚಾರಾಲ್ಲಭತೇ ಸುಖಂ |
ಆಚಾರಾತ್ ಸ್ವರ್ಗಮಕ್ಷಯ್ಯಂ ತಸ್ಮಾದಾಚಾರವಾನ್ ಭವೇತ್ ||

ಲೋಕದಲ್ಲಿ ಜನರು ಮೊದಲಿನಿಂದಲೂ ಯಾವಯಾವ ನಡೆವಳಿಕೆಗಳನ್ನು ನೋಡುತ್ತಿರುವರೋ ಅವುಗಳನ್ನು ಕ್ರಮಕ್ರಮವಾಗಿ ಅನುಸರಿಸುವರು. ಹೀಗೆ ಅನುಸರಿಸುವುದರಲ್ಲಿ ತಮ್ಮ ಹಿರಿಯರನ್ನೂ ಸ್ನೇಹಿತರನ್ನೂ ನೆರೆಹೊರೆಯವರನ್ನೂ ಪರಿಚಿತರನ್ನೂ ನೋಡಿ ನಡತೆ ಉಡಿಗೆ ತೊಡಿಗೆ ಮೊದಲಾದ ಅನೇಕಭಾಗಗಳಲ್ಲಿ ಅವರಂತೆ ನಡೆದುಕೊಳ್ಳುವುದಕ್ಕೆ ಪ್ರಯತ್ನಮಾಡುವರು. ಆದುದರಿಂದಲೇ " ತಂದೆಯಂತೆ ಮಗ, ತಾಯಿಯಂತೆ ಮಗಳು, ಗುರುವಿನಂತೆ ಶಿಷ್ಯ " ಎಂಬ ಲೋಕೋಕ್ತಿಯುಂಟಾಗಿದೆ. ಹಿರಿಯರೇ ಮೊದಲಾದವರು ಒಳ್ಳೆಯ ನಡತೆಯುಳ್ಳವರಾಗಿಯೂ ಒಳ್ಳೆಯ ಶೀಲಸ್ವಭಾವವುಳ್ಳವರಾಗಿಯೂ ಸತ್ಯಸಂಧರಾಗಿಯೂ ದುರಾಚಾರಗಳಿಲ್ಲದವರಾಗಿಯೂ ಇದ್ದರೆ ಅವರ ಸಹವಾಸದಿಂದ ನಮಗೂ ಅವರ ನಡತೆಗಳು ಕ್ರಮಕ್ರಮವಾಗಿ ಬರುವುವು. ಹಾಗಲ್ಲದೆ ಅವರು ದುಷ್ಟರಾಗಿಯೂ ದುರಾಚಾರವಂತರಾಗಿಯೂ ಜೂಜುಗಾರರಾಗಿಯೂ ವಿಷಯಲಂಪಟರಾಗಿಯೂ ಕುಡುಕರಾಗಿಯೂ ಇದ್ದರೆ ಅವರ ಸಹವಾಸದಿಂದ ಅವರ

ದುಷ್ಟಸ್ವಭಾವಗಳೆಲ್ಲವೂ ನಮ್ಮಲ್ಲಿಯೂ ಕ್ರಮವಾಗಿ ಬಂದು ನೆಲೆಗೊಳ್ಳುವುವು. ದುರ್ಮಾರ್ಗರ ಸಹವಾಸವನ್ನು ಮಾಡತಕ್ಕವರು, ರಾತ್ರಿ ನೋಡಿದ ಭಾವಿಗೆ ಹಗಲು ಬೀಳತಕ್ಕವರ ಹಾಗೆಂದು ಧಾರಾಳವಾಗಿ ಹೇಳಬಹುದಾಗಿರುತ್ತದೆ. ಆದುದರಿಂದ ಹಿರಿಯರೇ ಆಗಲಿ, ನೆರೆಹೊರೆಯವರೇ ಆಗಲಿ, ಅಥವಾ ನಮ್ಮ ಗೌರವಕ್ಕೆ ಪಾತ್ರರಾದ ಯಾರೇ ಆಗಲಿ ಮಾಡಬಾರದ ಕೆಲಸಗಳನ್ನು ಮಾಡುತ್ತಿದ್ದರೆ, ದೊಡ್ಡವರು ಮಾಡುತ್ತಾರೆಂದು ನಾವು ಅವುಗಳನ್ನು ಅವಲಂಬಿಸಬಾರದು ಅನೇಕಸದ್ಗುಣಗಳುಳ್ಳವರಲ್ಲಿ ಕೆಲವುದುರ್ಗುಣಗಳಿದ್ದರೆ ಅವುಗಳನ್ನು ಬಿಟ್ಟು ಅವರ ಸದ್ಗುಣಗಳನ್ನು ಮಾತ್ರ ನಾವು ಅವಲಂಬಿಸಬೇಕು. ಸಹವಾಸದೋಷದಿಂದ ಅನೇಕರಿಗೆ ನಸ್ಯಹಾಕುವುದು, ಹೊಗೇಬತ್ತಿ ಸೇದುವುದು, ಅಗವ್ಯಾಗಮನಗಳನ್ನು ಮಾಡುವುದು, ಅಭಕ್ಷ್ಯಭಕ್ಷಣಗಳನ್ನು ಮಾಡುವುದು ಇವುಗಳೆಲ್ಲಾ ಪ್ರಾಪ್ತವಾಗುತ್ತವೆ. ಇವು ಅಯೋಗ್ಯವಾದುವುಗಳೆಂದೂ ನಾಶಕರವಾದುವುಗಳೆಂದೂ ತಿಳದಿದ್ದರೂ ಅಭ್ಯಾಸಬಲದಿಂದ ಅವರಿಗೆ ಇವುಗಳನ್ನು ಬಿಡುವುದಕ್ಕೇ ಆಗುವುದಿಲ್ಲ.

ಆದುದರಿಂದ ನಾವು ನಡೆಯುತಕ್ಕ ನಡೆವಳಿಕೆಗಳಲ್ಲಿ ಯಾವುವು ಆಚರಣೆಗೆ ಅರ್ಹವೆಂದು ಅನುಭವಸಿದ್ಧವಾಗಿವೆಯೋ ಅವುಗಳೇ ಅವಲಂಬನೀಯವಾದುವುಗಳು. ಹೇಗೆಂದರೆ,—ಭೋಜನಮಾಡುವುದು ಅತ್ಯಂತ ಆವಶ್ಯಕವಾದದ್ದು. ಭೋಜನಮಾಡದಿದ್ದರೆ ಬದುಕುವುದಕ್ಕೇ ಆಗುವುದಿಲ್ಲ. ನಸ್ಯ ಬೀಡಿ ಹೊಗೇಬತ್ತಿ ಇವುಗಳನ್ನು ಸೇವಿಸತಕ್ಕದ್ದು ಭೋಜನದಷ್ಟು ಆವಶ್ಯಕವಾದುದಲ್ಲ; ಮತ್ತು ಇವುಗಳಿಂದ ಅನೇಕ ಕೇಡುಗಳು ಸಂಭವಿಸುವುವು. ನೀರನ್ನು ಕುಡಿಯದಿದ್ದರೆ ದಾಹಶಾಂತಿಯಾಗುವುದಿಲ್ಲ. ಸಾರಾಯಿ ಮೊದಲಾದುವುಗಳನ್ನು ಸೇವಿಸತಕ್ಕದ್ದು ನೀರಿನಷ್ಟು ಆವಶ್ಯಕವಾದುದಲ್ಲ. ಇದೇರೀತಿಯಲ್ಲಿ ದುರ್ವ್ಯಾಪಾರಗಳೆಲ್ಲಾ ಆವಶ್ಯಕಗಳಲ್ಲವೆಂದೂ ಅನೇಕ ಕೆಡುಕುಗಳನ್ನುಂಟುಮಾಡುವುವೆಂದೂ ಚೆನ್ನಾಗಿ ಗೊತ್ತಾಗುವುದು. ಆದ

ಕಾರಣ ಇಷ್ಟಾರ್ಥಗಳನ್ನು ಸಾಧಿಸಬೇಕೆಂಬ ಜನರಿಗೆ ದುರ್ವ್ಯಾಪಾರ ಗಳಲ್ಲಿ ಪರಾಙ್ಮುಖತೆಯು ಅತ್ಯಾವಶ್ಯಕವಾದದ್ದು.



## ಮರ್ಯಾದೆ.

ಅಪಕರ್ತಾಪಿ ಲೋಕೇ ಸ್ಯಾತ್ ಮಾನನಾದುಪಕಾರಕಃ |
ತಸ್ಮಾದ್ವಶ್ಯಕರಂ ನಿತ್ಯಂ ಸದ್ಭಿಸ್ಸಮ್ಮಾನನಂ ಸ್ಮೃತಂ ||

ಜನರ ತಾರತಮ್ಯಗಳನ್ನರಿತು ವಂದನೆಗಳನ್ನು ಮಾಡುವುದು, ಪ್ರತ್ಯುತ್ಥಾನಪೂರ್ವಕವಾಗಿ ಆಸನಾದಿಗಳನ್ನು ಕೊಡುವುದು, ಉಪಚಾರೋಕ್ತಿಗಳಿಂದ ಮಾತನಾಡಿಸುವುದು ಇವೇಮೊದಲಾದ ಕ್ರಮಗಳನ್ನು ಅನುಸರಿಸುವುದಕ್ಕೆ ಮರ್ಯಾದೆಯೆಂಬುದಾಗಿ ಹೆಸರು. ಪ್ರಪಂಚದಲ್ಲಿ ಆಬಾಲವೃದ್ಧರಿಗೂ ಸ್ವಾಭಿಮಾನವಿರುವಕಾರಣ ಮರ್ಯಾದೆಗೆ ವಶ್ಯರಾಗದಿರುವವರೇ ಅಪೂರ್ವ. ಮರ್ಯಾದೆಮಾಡುವುದರಲ್ಲಿ ಗೌರವಲಾಘವಗಳನ್ನೂ ಕಾಲಾಕಾಲಗಳನ್ನೂ ಸಂದರ್ಭಗಳನ್ನೂ ಅರಿಯದೆ ಬಾರಿಬಾರಿಗೂ ಮಾಡಿದರೆ ಅದರ ಗಣ್ಯತೆಯು ತಪ್ಪುವುದು. ತಂದೆಯು ಮಗನಿಗೂ, ಅತ್ತೆಯು ಸೊಸೆಗೂ, ಗುರುವು ಶಿಷ್ಯನಿಗೂ, ಧಣಿಯು ತನ್ನ ಚಾಕರನಿಗೂ ತಾರತಮ್ಯಗಳನ್ನೂ ಕಾಲಾಕಾಲಗಳನ್ನೂ ಅರಿತು ಉಪಚಾರೋಕ್ತಿಗಳಿಂದ ಎಷ್ಟು ಶ್ರಮಕರವಾದ ಕೆಲಸಗಳನ್ನು ಹೇಳಿದರೂ ಅವರು ಅವುಗಳನ್ನು ಶ್ರಮವೆಂದು ಭಾವಿಸದೆ ಉಪಚಾರೋಕ್ತಿರೂಪವಾದ ಮರ್ಯಾದೆಗೆ ತಾವು ಭಾಗಿಗಳಾಗಬೇಕೆಂಬ ಅಭಿಲಾಷೆಯಿಂದ ಆ ಕೆಲಸಗಳನ್ನು ಮನಃಪೂರ್ವಕವಾಗಿ ನೆರವೇರಿಸುವರು. ಹಾಗಲ್ಲದೆ ಕಠಿನೋಕ್ತಿಯಿಂದ ತಂದೆಯು ಮಗನಿಗೂ, ಅತ್ತೆಯು ಸೊಸೆಗೂ, ಗುರುವು ಶಿಷ್ಯನಿಗೂ, ಧಣಿಯು ತನ್ನ ಚಾಕರನಿಗೂ ಸಾಧಾರಣವಾದ ಕೆಲಸಗಳನ್ನು ಹೇಳಿದರೂ, ಅದನ್ನುಲ್ಲಂಘಿಸಬೇಕೆಂಬ

ಬುದ್ಧಿಯು ಮಗನಿಗೂ ಸೊಸೆಗೂ ಶಿಷ್ಯರಿಗೂ ಚಾಕರರಿಗೂ ಹುಟ್ಟಿಯೇ ಹುಟ್ಟುವುದು. ಒಂದುವೇಳೆ ಯತ್ನವಿಲ್ಲದೆ ಅವರು ಅದನ್ನು ಮಾಡಿದರೂ ಅಸಮಾಧಾನದಿಂದ ಗೊಣಗುಟ್ಟುತ್ತಾ ಕಾಟಕ್ಕಾಗಿ ಮಾಡುವರಂತೆ ಮಾಡುವರು.

ಇದಲ್ಲದೆ ಒಂದೊಂದು ಸಂದರ್ಭದಲ್ಲಿ ಪರಿಚಯವಿಲ್ಲದವರಿಗಾದರೂ ಮರ್ಯಾದೆಯಿಂದ ಯಾವುದಾದರೂ ಒಂದು ಕೆಲಸವನ್ನು ಹೇಳಿದರೆ ಅವರು ಕೂಡ ಅದನ್ನು ನೆರವೇರಿಸುವರು. ಆದುದರಿಂದಲೇ " ಉಪಚಾರ ಕೋಟಿಬಾಳುವುದು " ಎಂಬ ಗಾದೆಯು ರೂಢಿಯಲ್ಲಿದೆ. ಎಲ್ಲಾ ವೃತ್ತಿಗಳಲ್ಲಿಯೂ ಯಾರು ವಿಶೇಷ ಉನ್ನತಸ್ಥಿತಿಗೆ ಬಂದಿರುವರೋ ಅವರನ್ನು ಪರೀಕ್ಷಿಸಿ ನೋಡಿದರೆ ಅವರು ಹಾಗೆ ಉನ್ನತಸ್ಥಿತಿಗೆ ಬರುವುದಕ್ಕೆ ಒದಗಿದ ಅನೇಕಕಾರಣಗಳಲ್ಲಿ ಮರ್ಯಾದೆಯ ನಡವಳಿಕೆಯೂ ಒಂದಾಗಿರುತ್ತದೆ. ಮರ್ಯಾದೆಯಿಂದ ನಡೆದುಕೊಳ್ಳತಕ್ಕವರನ್ನು ಎಲ್ಲರೂ ಪುರಸ್ಕರಿಸುತ್ತಾರೆ. ಇತರರಿಗೆ ಬಹಳ ಧನವ್ಯಯದಿಂದ ಆಗತಕ್ಕ ಕೆಲಸಗಳಲ್ಲಿ ಅನೇಕವನ್ನು ಇವರು ಮರ್ಯಾದೆಗಳಿಂದ ಸಾಧಿಸುತ್ತಾರೆ. ಆದುದರಿಂದ ಎಲ್ಲರೂ ಗರ್ವದಿಂದ ಪ್ರತಿನಿವಿಷ್ಟರಾಗದೆ ಕಾಲಾಕಾಲ ತಾರತಮ್ಯ ಸಂದರ್ಭಗಳನ್ನರಿತು ಮರ್ಯಾದೆಯಿಂದ ನಡೆದುಕೊಳ್ಳುವುದನ್ನು ಕಲಿತುಕೊಂಡು ನಡೆಯುವುದು ಅಭಿವೃದ್ಧಿಗೆ ಸಾಧಕವಾದದ್ದು.



## ಲೋಕವ್ಯವಹಾರ.

ಅಧೀತಸರ್ವಶಾಸ್ತ್ರೋಪಿ ಯೋ ನ ಜಾನಾತಿ ಯುಕ್ತಿತಃ |
ಲೌಕಿಕಾನ್ ವಿಷಯಾನ್ ಸರ್ವಾನ್ ಸ ಶ್ರಿಯಾ ಹೀಯತೇ ಧ್ರುವಂ ||

ಲೋಕದಲ್ಲಿ ನಡೆಯತಕ್ಕ ವ್ಯಾವಹಾರಿಕ ವಿಷಯಗಳಿಗೆ ಸಂಬಂಧಪಟ್ಟ ವರ್ತಮಾನಗಳನ್ನು ತಿಳಿದುಕೊಳ್ಳುವುದು ಆವಶ್ಯಕವಾದದ್ದು. ಪ್ರತಿ

ಯೊಬ್ಬನೂ ತನ್ನ ಕೆಲಸಕ್ಕೆ ಸಂಬಂಧಪಟ್ಟ ವಿಷಯಗಳನ್ನು ಮಾತ್ರವ ಲ್ಲದೆ ಎಲ್ಲಾ ಸಂಗತಿಗಳನ್ನೂ ಸಾಧಾರಣವಾಗಿ ತಿಳಿದುಕೊಂಡಿರಬೇಕು. ಹಾಗೆ ತಿಳಿದುಕೊಂಡಿದ್ದರೆ ಅದು ವ್ಯರ್ಥವಾಗುವುದಿಲ್ಲ. ಪ್ರತಿಯೊಬ್ಬನೂ ತಾನು ಅವಲಂಬಿಸಿದ ವೃತ್ತಿಯಜೆತೆಗೆ ಇನ್ನು ಕೆಲವು ವೃತ್ತಿಗಳ ಸಂಗತಿ ಗಳನ್ನೂ ತಿಳಿದುಕೊಂಡಿರುವುದು ಉತ್ತಮ. ಒಂದುವೃತ್ತಿಗೆ ಸೇರಿದವರು ಇತರ ವೃತ್ತಿಗೆ ಸೇರಿದ ಜನರೊಡನೆ ಕೊಡೋಣ ತೆಗೆದುಕೊಳ್ಳೋಣ ಮೊದಲಾದ ವ್ಯವಹಾರಗಳಲ್ಲಿ ಸೇರಬೇಕಾಗುತ್ತದೆ. ಅಂಥ ಸಂದರ್ಭಗ ಳಲ್ಲಿ ಇತರ ವೃತ್ತಿಗಳ ವಿಷಯವಾಗಿ ಪೂರ್ವಾಪರಜ್ಞಾನವು ಆವಶ್ಯಕವಾ ಗುವುದು. ಅಂಥ ತಿಳಿವಳಿಕೆಯಿಲ್ಲದಿದ್ದರೆ ಮೋಸಹೋಗುವುದೂ ಉಂಟು. ಪುಸ್ತಕಗಳನ್ನು ಓದಿ ತಿಳಿದುಕೊಳ್ಳತಕ್ಕ ವಿಷಯಗಳ ಜೆತೆಗೆ ಪಂಡಿತಸಂಭಾಷಣೆ ಮೊದಲಾದುವುಗಳಿಂದ ಬೇರೆಬೇರೆ ವೃತ್ತಿಗಳ ಮರ್ಮಗ ಗಳನ್ನೂ ತಿಳಿದುಕೊಂಡಿರಬೇಕು. ಹೀಗೆ ಬೇರೆಬೇರೆ ವೃತ್ತಿಗಳ ಮರ್ಮಗ ಳನ್ನು ತಿಳಿದುಕೊಂಡಿದ್ದರೆ ಕೆಲವು ಸಂದರ್ಭಗಳಲ್ಲಿ ತಾವು ಅವಲಂಬಿಸಿ ರುವ ವೃತ್ತಿಗಿಂತಲೂ ಮತ್ತಾವುದಾದರೂ ಒಂದು ಅಭ್ಯಸ್ತವಾದ ವೃತ್ತಿ ಯಲ್ಲಿ ಹೆಚ್ಚಾಗಿ ಫಲ ಬರುವುದಾಗಿ ತೋರಿದ ಪಕ್ಷದಲ್ಲಿ ಅದನ್ನು ಅವಲಂ ಬಿಸುವುದಕ್ಕೆ ಅವಕಾಶವಾಗುತ್ತದೆ. ಆದುದರಿಂದ ಒಂದೇ ವೃತ್ತಿಯಲ್ಲಿ ಪರಿ ಚಯವಿರುವುದಕ್ಕಿಂತ ತಾನು ಅವಲಂಬಿಸಿರುವ ವೃತ್ತಿಯ ಜತೆಗೆ ತನಗೆ ಸಾಧ್ಯವಾಗಬಹುದಾದ ಮತ್ತೆ ಕೆಲವು ವೃತ್ತಿಗಳ ಮರ್ಮಗಳನ್ನೂ ತಿಳಿದು ಕೊಂಡು ಸಾಧ್ಯವಾದ ಮಟ್ಟಿಗೆ ಲೋಕವ್ಯವಹಾರಜ್ಞನಾಗಿರಬೇಕು.



# ನಂಬಿಕೆ.

---

ವಿಶ್ವಾಸಃ ಸರ್ವಕಾರ್ಯಾಣಾಂ ನಿದಾನಂ ಮುಖ್ಯಮುಚ್ಯತೇ |
ತಸ್ಮಾತ್ ಪುರ್ಮಾ ಪ್ರಯತ್ನೇನ ರಕ್ಷೇದ್ವಿಶ್ವಾಸಮುತ್ತಮಂ ||

ಆಡಿದ ಮಾತಿಗೆ ತಪ್ಪದೆ ನಡೆಯುತಕ್ಕವರನ್ನು ನಂಬಿಕೆವಂತರೆಂಬು ದಾಗಿ ಹೇಳುವರು. ಆಧಾರ ಮೊದಲಾದುವುಗಳನ್ನು ಕಾಣಿಸಿ ಪತ್ರಬರೆದು ಕೊಟ್ಟರೂ ನಂಬಿಕೆಯಿಲ್ಲದವನಿಗೆ ಒಂದುಕಾಸು ಸಾಲಹುಟ್ಟುವುದು ಕೂಡ ಕಷ್ಟ. ಇದು ಯಾವುದೂ ಇಲ್ಲದೆಯೇ ನಂಬಿಕೆಯುಳ್ಳನಿಗೆ ಸಾಲಮೊದ ಲಾದುವು ಸುಲಭವಾಗಿ ದೊರೆಯುವುವು. ನಂಬಿಕೆಯುಳ್ಳವನನ್ನು ಸರ್ವರೂ ನಂಬುವರು. ನಂಬಿಕೆಯಿಂದಲೇ ವರ್ತಕರು ಹುಂಡಿ ಮೊದಲಾದುವುಗಳಿಗೆ ಹಣಗಳನ್ನು ಸೇರಿಸುವುದಕ್ಕೋಸ್ಕರ ತಮ್ಮ ಗುರ್ತುಕಂಡವರಲ್ಲೆಲ್ಲಾ ಇದ್ದಷ್ಟು ಹಣಗಳನ್ನು ತೆಗೆದುಕೊಂಡುಬಂದು ಹುಂಡಿ ಹಣಕ್ಕೆ ಜತೆ ಮಾಡಿ ಕೊಟ್ಟು ಮತ್ತೆರಡುಮೂರುದಿನಗಳಲ್ಲಿಯೇ ಅವರಿಗೆ ಆ ಹಣವನ್ನು ಸೇರಿಸಿ ಕೊಟ್ಟುಬಿಡುವರು. ಇದಲ್ಲದೆ ಕೋರ್ಟು ಮೊದಲಾದ ಸ್ಥಳಗ ಳಲ್ಲೂ ಕೂಡ ನಂಬಿಕೆವಂತರ ಹೇಳಿಕೆಯನ್ನು ವಿಶೇಷವಾಗಿ ಗೌರವಿಸು ವರು. ಯಾವವೃತ್ತಿಯವರೇ ಆಗಲಿ ಆಡಿದ ಮಾತಿನಂತೆ ನಡೆದುಕೊ ಳ್ಳುತ್ತಾ ನಂಬಿಕೆಯುಳ್ಳವರಾಗಿದ್ದರೆ ಅಂಥವರನ್ನು ಪ್ರತಿಯೊಬ್ಬರೂ ಆದರಿ ಸುವರು. ಅಂಥವರು ಸಿಕ್ಕಿದರೆ ಸಾಕೆಂದು ಜನರು ಹುಡುಕುತ್ತಿರುವರು. ಹೀಗೆ ನಂಬಿಕೆವಂತರು ಸರ್ವರ ಗೌರವಕ್ಕೂ ಪಾತ್ರರಾಗುವರಾದ್ದರಿಂದ ಸರ್ವರೂ ಈ ಗುಣವನ್ನು ಸಂಪಾದಿಸಿ ವೃದ್ಧಿಗೆ ಬರುವ ಪ್ರಯತ್ನವನ್ನು ಮಾಡಬೇಕು.



# ದ್ಯೂತ.

ದ್ಯೂತಾದನರ್ಥಾಃ ಸಕಲಾಃ ಮಾನಹಾನಿಶ್ಚ ಸನ್ತತಂ |
ದ್ಯೂತಾದ್ಧರ್ಮಸ್ತಥಾರ್ಥಶ್ಚ ಕಾಮಶ್ಚ ಪರಿಹೀಯತೇ ||

ಲೋಕದಲ್ಲಿ ದ್ಯೂತವು ಬಹಳ ಕೆಟ್ಟದ್ದು. ಕೆಲವರು ಮನಸ್ಸಿಗೆ ಜುಗುಪ್ಸೆಯುಂಟಾದಾಗ ಇಸ್ಪೀಟು ಗಂಜೀಫು ಪಗಡೆ ಮೊದಲಾದ ಆಟಗಳನ್ನಾಡಿದರೆ ಆ ಜುಗುಪ್ಸೆಯು ತಪ್ಪುವುದೆಂದು ಭಾವಿಸಿರುವರು. ಈ ಭಾವನೆಯು ಕೂಡ ಬಹಳ ಅನರ್ಥಕಾರಿಯಾದದ್ದು. ಏಕೆಂದರೆ,—ಜೂಜೆಂಬ ಮಾಯಾ ಪಾಶಕ್ಕೊಳಗಾದವರು ಅದರಿಂದ ಬಿಡುಗಡೆಯಾಗಿ ಬರುವುದು ಬಹಳ ಅಸಾಧ್ಯವು. ಜೂಜಾಡುವುದಕ್ಕೆ ಬಾರದಿರುವವರು ಪ್ರಾರಂಭದಲ್ಲಿ ಅಭ್ಯಾಸ ಮಾಡುವುದಕ್ಕಾಗಿ ಬರೀಆಟಗಳನ್ನಾಡುತ್ತಾ, ಗೆದ್ದವರು ಸೋತವರಮೇಲೆ ಇಷ್ಟಿಷ್ಟು ತಪ್ಪುಗಳಾದುವೆಂಬುದಾಗಿ ಲೆಕ್ಕವನ್ನು ಹೊರಿಸುತ್ತಿರುವರು. ಹೀಗೆ ಕೆಲವು ದಿನಗಳು ಆಡಿ ಚೆನ್ನಾಗಿ ಆಟದಲ್ಲಿ ಪರಿಶ್ರಮವುಂಟಾದಮೇಲೆ 'ಬರೀ ಆಟಗಳನ್ನಾಡುವುದರಲ್ಲಿ ಏನು ರುಚಿಯಿರುವುದು ? ಒಂದೊಂದು ಆಟಕ್ಕೆ ಒಂದೊಂದು ಕಾಸನ್ನಾದರೂ ಇಟ್ಟರೆ, ಆಡುವುದರಿಂದ ಉಲ್ಲಾಸವೂ ಆಟದಲ್ಲಿ ಶ್ರದ್ಧೆಯೂ ಉಂಟಾಗುವುವು,' ಎಂದು ಆರೀತಿ ಏರ್ಪಡಿಸುವರು. ಈ ಅಭ್ಯಾಸವು ನೆಟ್ಟನಂತರ 'ಇದೇನು ದರಿದ್ರ ? ಒಂದೊಂದು ಕಾಸಿನಿಂದ ಆಟದಲ್ಲಿ ಏನು ಆಸಕ್ತಿಯುಂಟಾದೀತು ? ಇನ್ನು ಸ್ವಲ್ಪವಾದರೂ ಹೆಚ್ಚಿಸಿದರೆ ಆಗ ಆಟದ ರುಚಿಯು ತಿಳಿಯುವುದು,' ಎಂದು ಹೇಳಿ, ಆಟಕ್ಕೆ ಕಾಲಾಣೆಯಂತೆ ಏರ್ಪಡಿಸುವರು. ಹೀಗಾದ ಕೆಲವು ದಿನಗಳಬಳಿಕ 'ಇದೂ ಆಟಕ್ಕೆ ಲಕ್ಷಣವಲ್ಲ. ಒಳ್ಳೇ ಆಟಗಾರರು ಬಂದು ನೋಡಿದರೆ ಹೀಯಾಳಿಸುವಹಾಗೆ ಇದೆಯೇಹೊರತು ಇದು ದೊಡ್ಡ ಆಟಗಾರರಿಗೆ ಯೋಗ್ಯವಾಗಿಲ್ಲ,' ಎಂಬುದಾಗಿ ಹೇಳುತ್ತ ಒಂದು ಆಟಕ್ಕೆ ಒಂದಾಣೆಯಿಂದ ಪ್ರಾರಂಭಿಸಿ

ಅನೇಕ ರೂಪಾಯಿಗಳವರೆಗೂ ಇಡುವುದಕ್ಕುಪಕ್ರಮಿಸುವರು. ಈಪ್ರಕಾರ ಅಭ್ಯಾಸವಾದನಂತರ ಒಂದೊಂದುವೇಳೆ ಅದರಿಂದ ಲಾಭವುಂಟಾದರೂ ಮತ್ತೊಂದುವೇಳೆ ವಿಶೇಷ ನಷ್ಟ ಸಂಭವಿಸುವುದು. ಜನರು ದ್ಯೂತಕ್ಕೆ ಕುಳಿತುಕೊಂಡಮೇಲೆ ಸೋಲುತ್ತಿದ್ದರೂ ಮತ್ತೆ ಗೆಲ್ಲುವೆವೆಂಬ ದುರಾಶೆಯಿಂದ ಮತ್ತೆಮತ್ತೆ ಆಡುವುದಕ್ಕೆ ಪ್ರಯತ್ನಿಸುವರು. ದ್ಯೂತದಲ್ಲಿ ಸೋತು ಕೋಪವು ಉಲ್ಬಣಸ್ಥಿತಿಗೆ ಬಂದಮೇಲೆ ಕರ್ಣಕಠೋರವಾದ ಮಾತುಗಳು ಹೊರಡುವುದಕ್ಕುಪಕ್ರಮವಾಗಿ ವೃದ್ಧಿಯನ್ನೈದುವುವು. ಅದರೊಡನೆ ಮಾತ್ಸರ್ಯವೂ ತಲೆಹಾಕುವುದು. ಜೂಜಾಟವು ಅಭ್ಯಾಸವಾದನಂತರ ಅದನ್ನು ಬಿಟ್ಟುಬಿಡಬೇಕಾದರೆ ಬಹಳ ಶ್ರಮವಾಗುವುದು ಜೂಜುಗಾರನಿಗೆ ಎಷ್ಟು ದ್ರವ್ಯವಿದ್ದರೂ ಅದೂ ಸಾಲದೆ ಕೊನೆಗೆ ಅದಕ್ಕೋಸ್ಕರ ಸುಳ್ಳು, ಮೋಸ, ವಂಚನೆ, ಕಳ್ಳತನ ಮೊದಲಾದುವುಗಳಿಂದಲಾದರೂ ಅರ್ಥಾರ್ಜನೆಮಾಡಬೇಕಾಗಿ ಬರುವುದು. ಇವುಗಳಮೂಲಕ ಧನಸಿಕ್ಕದೆ ಜೂಜಾಟ ನಿಂತುಹೋಗುವ ಸಂದರ್ಭ ಬಂದರೆ ಚಿರಕಾಲದಿಂದ ಅಭ್ಯಸ್ತವಾಗಿರುವ ಇದರ ಮಹಿಮಾತಿಶಯದಿಂದ ಈದಿವಸ ಯಾವವಿಧವಾಗಿಯೂ ದುಡ್ಡುಸಿಕ್ಕದೆ ಆಟಕ್ಕೆ ವಿಘ್ನ ಸಂಭವಿಸಿತಲ್ಲಾ ಏನುಮಾಡಲಿ ಎಂಬುದಾಗಿ ಹುಚ್ಚನಂತೆ ಆಡುತ್ತಾ ಕೊನೆಗೆ ಹೆಂಡತಿಯ ಕೊರಳಿನಲ್ಲಿರುವ ಮಾಂಗಲ್ಯವನ್ನಾದರೂ ಕಿತ್ತುಕೊಂಡು ಹೋಗಿ ಮಾರಿ ಜೂಜಾಡುವರು. ಇದೇರೀತಿಯಲ್ಲಿ ಚಕ್ರವರ್ತಿಪದವಿಯಲ್ಲಿದ್ದ ನಳ ಯುಧಿಷ್ಠಿರ ಮೊದಲಾದವರುಕೂಡ ದ್ಯೂತಾಸಕ್ತಿಯಿಂದ ಕೇವಲ ಹೀನಸ್ಥಿತಿಗೆ ಬಂದದ್ದು ಪ್ರಸಿದ್ಧವಾಗಿಯೇಇದೆ. ಈಗ ಪ್ರತ್ಯಕ್ಷವಾಗಿ ದ್ಯೂತದಿಂದ ಸರ್ವಸ್ವವನ್ನೂ ಕಳೆದುಕೊಳ್ಳುತ್ತಾ ಹೀನಸ್ಥಿತಿಗೆ ಬರುತ್ತಲಿರುವವರ ದೃಷ್ಟಾಂತಗಳು ಎಲ್ಲೆಲ್ಲಿಯೂ ಅಸಂಖ್ಯಾತವಾಗಿವೆ ದೀಪವನ್ನು ನೋಡಿ ಭ್ರಮಿಸಿ ಬಿದ್ದು ಪ್ರಾಣವನ್ನು ಕಳೆದುಕೊಳ್ಳುವ ಶಲಭಗಳಂತೆ ಅನೇಕರು ದ್ಯೂತಾಸಕ್ತಿಯಿಂದ ಕೆಡುತ್ತಿರುವುದನ್ನು

ನೋಡಿದರೆ ಆಶ್ಚರ್ಯವಾಗುತ್ತದೆ. ದೊಡ್ಡವರು ಲೋಕದಲ್ಲಿರುವ ದೋಷಗಳೆಲ್ಲಾ ಜೂಜಿನಲ್ಲಿರುವ ದೋಷವು ಅಧಿಕವಾದದ್ದೆಂದು ಹೇಳುವರು. "ಪಗಡೆಯಾಟ ಪಾಂಡವರನ್ನು ಕೆಡಿಸಿತು. ಗಂಜೀಫ ಆಡುವವನಿಗೆ ಗಂಜಿಗೂ ಮಾರ್ಗವಿಲ್ಲ" ಎಂಬ ಗಾದೆಯು ಗೊತ್ತೇ ಇದೆ. ಆದುದರಿಂದ ದ್ರವ್ಯವನ್ನು ಆರ್ಜಿಸುವುದರಲ್ಲಿಯೂ ಆರ್ಜಿಸಿದ ದ್ರವ್ಯವನ್ನು ಕಾಪಾಡುವುದರಲ್ಲಿಯೂ ಇಚ್ಛೆಯುಳ್ಳ ಸಮಸ್ತರೂ ಈ ದುಷ್ಟವಾದ ದ್ಯೂತದ ಕಡೆಗೆ ಮನಸ್ಸನ್ನು ತಿರುಗಿಸದೆ ಬಹಳ ಜಾಗರೂಕರಾಗಿರಬೇಕು.

---

## ಮದ್ಯಪಾನ.

ನ ಹಿ ಧರ್ಮಾರ್ಥಸಿದ್ಧ್ಯರ್ಥಂ ಪಾನಮೇವ ಪ್ರಶಸ್ಯತೇ |
ಪಾನಾದರ್ಥಶ್ಚ ಧರ್ಮಶ್ಚ ಕಾಮಶ್ಚ ಪರಿಹೀಯತೇ ||

ಲೋಕದಲ್ಲಿ ಮದ್ಯಪಾನಕ್ಕಿಂತ ನಿಂದ್ಯವಾದ ಕೆಲಸವು ಯಾವುದೂ ಅಲ್ಲ. ಕೆಲವರು ಅದನ್ನು ಸಲ್ಪವಾಗಿ ಸೇವಿಸುವುದರಿಂದ ಪ್ರಜ್ಞೆ ಅಧಿಕವಾಗುವುದೆಂದೂ, ಶರೀರಶ್ರಮ ಪರಿಹಾರವಾಗುವುದೆಂದೂ ಭಾವಿಸುವರು, ಈ ಭಾವನೆಯು ಬಹಳ ಅನರ್ಥಕಾರಿಯಾದದ್ದು. ಜನರಿಗೆ ಮದ್ಯಪಾನವು ಅಭ್ಯಾಸವಾದನಂತರ ದಿನದಿನಕ್ಕೆ ಅದರಲ್ಲಿ ಅಭಿರುಚಿಹೆಚ್ಚಿ ಶರೀರದಮೇಲೆ ಪ್ರಜ್ಞೆತಪ್ಪುವವರೆಗೂ ಸೇವಿಸುವಂತೆ ಆಗುವುದಲ್ಲದೆ ಯಾವಾಗಲೂ ಪಾನ ಮಾಡುತ್ತಿರಬೇಕೆಂದೇ ಆಸಕ್ತಿ ಹುಟ್ಟುವುದು. ಹೀಗೆ ಮದ್ಯಪಾನಾಭ್ಯಾಸವುಳ್ಳವರು ಪೂರ್ವಾಪರ ಪರ್ಯಾಲೋಚನೆಯಿಲ್ಲದೆ ತಮ್ಮಲ್ಲಿ ಸಂಚಿತವಾಗಿರುವ ಧನವನ್ನೆಲ್ಲಾ ಪಾನಕ್ಕೋಸ್ಕರ ವೆಚ್ಚಮಾಡಿ, ಕೊನೆಗೆ ತಮ್ಮ ಆಸ್ತಿಯನ್ನೆಲ್ಲಾ ಪಾನಾರ್ಥವಾಗಿ ವಿನಿಯೋಗಿಸಿ, ತಮ್ಮ ಕುಟುಂಬದವರಿಗೆ ಅನ್ನವಸ್ತ್ರಗಳಿಗೆ ಮಾರ್ಗವಿಲ್ಲದಂತೆಯೂ ಮಾಡುವರು. ಮದ್ಯಪಾನಾಭ್ಯಾಸಮಾಡಿ

ರತಕ್ಕ ಎಲ್ಲಾ ಕೆಲಸಗಾರರೂ ತಮ್ಮ ಶರೀರಶ್ರಮದಿಂದ ಸಂಪಾದಿಸಿದ್ದರಲ್ಲಿ ಸ್ವಲ್ಪಭಾಗವನ್ನು ಗೃಹಕೃತ್ಯಕ್ಕುಪಯೋಗಿಸಿ ಬೆಳಗಾಗುವಹೊತ್ತಿಗೆ ಮತ್ತೆ ನಿರ್ಗತಿಕರಾಗಿ ಶ್ರಮಪಡುತ್ತಲೇ ಇರುವರು. ಇವರು ಪಾನಕಾಲಕ್ಕೆ ಕೈಯಲ್ಲಿ ದುಡ್ಡಿಲ್ಲದಿದ್ದರೆ ತಮ್ಮಲ್ಲಿದ್ದ ಪದಾರ್ಥಗಳನ್ನು ಕೇಳಿದಷ್ಟಕ್ಕೆ ಕೊಟ್ಟು ಬಂದದ್ದನ್ನು ಪಾನಕ್ಕಾಗಿ ವಿನಿಯೋಗಿಸುವರು. ಶರೀರಶ್ರಮದಿಂದ ಸಂಪಾದಿಸತಕ್ಕವರು ತಮಗೆ ಸಂಪಾದಿಸುವುದಕ್ಕೆ ಶಕ್ತಿಸಾಲದಿದ್ದ ಕಾಲದಲ್ಲಿ ಹೆಂಡತಿಮಕ್ಕಳು ಸಂಪಾದಿಸಿಕೊಂಡು ಬಂದದ್ದರಲ್ಲಿ ಮದ್ಯಪಾನಕ್ಕಾಗಿ ಒಂದುಭಾಗವನ್ನುಪಯೋಗಿಸಿ ಸಂತುಷ್ಟರಾಗುವರು. ಮದ್ಯಪಾಯಿಗಳು ಒಂದುವೇಳೆ ಯಾವವಿಧವಾಗಿಯೂ ದುಡ್ಡು ಸಿಕ್ಕದಿದ್ದರೆ ಭಿಕ್ಷವನ್ನಾದರೂ ಬೇಡಿ, ಕಳ್ಳತನವನ್ನಾದರೂ ಮಾಡಿ ಬಂದ ದುಡ್ಡಿನಿಂದ ಮದ್ಯಪಾನಮಾಡುವರು. ಪಾನಾಸಕ್ತರಾದವರು ಯಾವಪ್ರಕಾರದಿಂದಲಾದರೂ ಮದ್ಯಪಾನ ಮಾಡಿ ಅದರಿಂದ ಮೈಮೇಲೆ ಸ್ಮರಣೆತಪ್ಪಿದಾಗ ಚರಂಡಿಗಳಲ್ಲಿಯೂ ಬೀದಿಗಳಲ್ಲಿಯೂ ಬಿದ್ದು ಮಾನವನ್ನು ಕಳೆದುಕೊಳ್ಳುವರು. ಇದಲ್ಲದೆ ಇವರಲ್ಲನೇಕರು ಉನ್ಮತ್ತಾವಸ್ಥೆಯಲ್ಲಿ ಮಾಡಬಾರದ ಕೆಲಸಗಳನ್ನು ಮಾಡಿ ಅದಕ್ಕೆ ಶಿಕ್ಷೆಯನ್ನನುಭವಿಸುವುದಲ್ಲದೆ ನಾನಾವಿಧವಾದ ಬುದ್ಧಿಭ್ರಮಣಗಳಿಗೂ ಗುರಿಯಾಗುವರು.

ಈ ಜನರು ಅಪೇಯಪಾನಗಳಿಂದ ತಮ್ಮ ಶರೀರವನ್ನು ಕೆಡಿಸಿಕೊಳ್ಳುವುದಲ್ಲದೆ ತಮ್ಮ ಪುತ್ರಕಳತ್ರಾದಿಗಳನ್ನುಕೂಡ ನಿಶ್ಯಂಕವಾಗಿ ಅಂಥ ದುರಾಚಾರ ಪ್ರವೃತ್ತಿಗೂ ಈ ದುರಭ್ಯಾಸದಿಂದ ಸಂಕ್ರಮಿಸುವ ಜನ್ಮಸಿದ್ಧವಾದ ರೋಗಗಳಿಗೂ ಗುರಿಮಾಡುವರು. ಆದುದರಿಂದಲೇ ಮದ್ಯಪಾನವು ಶ್ರುತಿಸ್ಮೃತ್ಯಾದಿಗಳಲ್ಲಿ ವಿಶೇಷವಾಗಿ ನಿಷೇಧಿಸಲ್ಪಟ್ಟಿರುವುದು. ನಮ್ಮ ಹಿರಿಯರುಕೂಡ ಮದ್ಯಪಾನದಿಂದುಂಟಾಗತಕ್ಕ ಅನರ್ಥ ಪರಂಪರೆಗಳನ್ನು ನೋಡಿ ' ಖಂಡಿತವಾಗಿ ಇದನ್ನು ಮಾಡಬಾರದು, ಇದರಿಂದ ಬಹು

ದೋಷಗಳು ಪ್ರಾಪ್ತವಾಗುತ್ತವೆ' ಎಂಬುದಾಗಿ ಇದನ್ನು ನಿಷೇಧಿಸಿರುವರು. ಕೆಟ್ಟಕೆಲಸಗಳಿಗೆ ಸ್ವಲ್ಪ ಮನಸ್ಸನ್ನು ಕೊಟ್ಟರೆ ಅದು ಕ್ರಮೇಣ ವೃದ್ಧಿಯನ್ನು ಹೊಂದಿ ಕಡೆಗೆ ಅನರ್ಥಕ್ಕೆ ಗುರಿಮಾಡದೆಬಿಡುವುದಿಲ್ಲ.

ಪೂರ್ವದಲ್ಲಿ ಯಾದವರು ಈ ದುರಭ್ಯಾಸಕ್ಕೊಳಗಾಗಿ ಪ್ರಜ್ಞೆತಪ್ಪಿ ಉನ್ಮತ್ತಾವಸ್ಥೆಯಲ್ಲಿ ಒಬ್ಬರನ್ನೊಬ್ಬರು ಕೊಂದು ತಮ್ಮ ಕುಲವನ್ನೇ ನಾಶಮಾಡಿಕೊಂಡರು. ಮದ್ಯಪಾನಮಾಡೋಣದರಿಂದ ಧರ್ಮಾರ್ಥಗಳೆಲ್ಲ ನಷ್ಟವಾಗುತ್ತವೆ. ಆದುದರಿಂದ ದ್ರವ್ಯಾದಿ ಪುರುಷಾರ್ಥಗಳನ್ನಪೇಕ್ಷಿಸುವವರು ಮದ್ಯಪಾನವನ್ನು ಮಾಡಬಾರದು, ಹಾಗೆ ಮಾಡುವವರ ಸಹವಾಸವನ್ನೂ ಮಾಡಬಾರದು. ಸಾರಾಯಿ, ಭಂಗಿ, ಅಫೀಂ ಮೊದಲಾದ ಮದದ್ರವ್ಯಗಳಲ್ಲಿ ಯಾವುದನ್ನೂ ಸೇವಿಸಬಾರದು.

---

## ಅಗಮ್ಯಾಗಮನ.

ಪರದಾರಾಭಿಮರ್ಶಾತ್ತು ನಾನ್ಯತ್ ಪಾಪಕರಂ ಮಹತ್ |
ಅಯಶಸ್ಯಮನಾಯುಷ್ಯಂ ಪರದಾರಾಭಿಮರ್ಶನಂ |
ಅರ್ಥಕ್ಷಯಕರಂ ಘೋರಂ ಪಾಪಸ್ಯ ಚ ಪುನರ್ಭವಂ ||

ಅಗಮ್ಯಾಗಮನವು ಬಹಳ ಹೇಯವಾದದ್ದು. ಇದನ್ನು ಅವಲಂಬಿಸಿದವರು ಇದೇ ಅತ್ಯುತ್ತಮವಾದ ಸುಖವೆಂದು ಭಾವಿಸಿರುವರು. ಇದರಿಂದ ಕುಲಕ್ಕೆ ನಿಂದೆಯೂ ತಮಗೆ ಅಪಯಶಸ್ಸೂ ಉಂಟಾಗುವುವು. ಈ ಕೃತ್ಯವನ್ನು ಮಾಡುವವರು ಕೊನೆಕೊನೆಗೆ ತಿರ್ಯಗ್ಜಂತುಗಳಿಗಿಂತಲೂ ಕಡೆಯಾಗಿ ಅರ್ಥಹಾನಿ, ಪ್ರಾಣಹಾನಿ, ಮಾನಹಾನಿಗಳನ್ನುಕೂಡ ಅನುಭವಿಸುವರು. ಹೀಗೆ ಇಷ್ಟು ದುಷ್ಟವಾದ ಕೃತ್ಯವು ಹೇಗೆತಾನೆ ಪರಮಸುಖವಾಗುವುದು ? ಇದನ್ನು ಮಾಡತಕ್ಕವರು ಬಂದುವೇಳೆ ಇಹದಲ್ಲಿ ಶಿಕ್ಷೆಯನ್ನು ತಪ್ಪಿಸಿಕೊಂ

ಡರೂ ಅದರಿಂದ ಪ್ರಾಪ್ತವಾಗುವ ರೋಗ ಮೊದಲಾದುವುಗಳನ್ನು ತಪ್ಪಿಸಿ ಕೊಳ್ಳಲಾರರು. ಪ್ರಬಲವಾದ ಪುಣ್ಯಪಾಪಗಳ ಫಲಗಳನ್ನು ಈ ಲೋಕ ದಲ್ಲಿಯೇ ಅನುಭವಿಸಬೇಕಾಗುತ್ತದೆಂದು ನಮ್ಮ ಹಿರಿಯರು ಹೇಳಿರುವುದ ಕ್ಕನುಸಾರವಾಗಿ, ಪಾಪಕೃತ್ಯವಾದ ಜಾರತ್ವವನ್ನು ಮಾಡತಕ್ಕ ಜನರು ಈ ಮರ್ತ್ಯಲೋಕದಲ್ಲಿಯೇ ಅನಿವರ್ಚನೀಯವಾದ ದುಃಖಗಳನ್ನನುಭವಿಸಿ ಧರ್ಮಸಾಧನೆಗೆ ಸಹಾಯಭೂತವಾದ ದೇಹದಾರ್ಢ್ಯವನ್ನುಕೂಡ ಕಳೆದುಕೊ ಳ್ಳುವರು. ಈ ದುರಾಚಾರದಿಂದುಂಟಾಗತಕ್ಕ ಶಿಕ್ಷೆಯು ಎಂಥವರಿಗೂ ತಪ್ಪುವದಿಲ್ಲ.

ದೇವತೆಗಳಿಗೆ ಒಡೆಯನಾದ ದೇವೇಂದ್ರನು ಗೌತಮಋಷಿಪತ್ನಿಯಾದ ಅಹಲ್ಯೆಯೊಡನೆ ಜಾರತ್ವವನ್ನು ಮಾಡಿ ಶಾಪಗ್ರಸ್ತನಾಗಿ ಪಡಬಾರದ ಕಷ್ಟ ಗಳನ್ನೆಲ್ಲಾ ಪಟ್ಟು ಅಂಗವಿಕಾರವನ್ನು ಹೊಂದಿ ಅಪಯಶಸ್ಸಿಗೆ ಗುರಿ ಯಾದನು. ರಾಕ್ಷಸರಿಗೆ ಒಡೆಯನಾದ ರಾವಣನು ಸೀತಾಪಹಾರಮಾಡಿದಾಗ "ಲೋಕದಲ್ಲಿ ಜನರು ತಮ್ಮತಮ್ಮ ಹೆಂಡತಿಯರ ಪಾತಿವ್ರತ್ಯಸಂರಕ್ಷಣೆ ಯಲ್ಲಿ ಹೇಗೆ ಆಸಕ್ತರಾಗಿರುವರೋ ಹಾಗೆಯೇ ಇತರ ಸ್ತ್ರೀಯರ ಪಾತಿ ವ್ರತ್ಯ ರಕ್ಷಣವಲ್ಲೂ ಆಸಕ್ತರಾಗಿರಬೇಕು. ಪರದಾರಾಸಕ್ತಿಗಿಂತ ಬೇರೆ ಪಾಪವಿಲ್ಲ. ಪರಸ್ತ್ರೀಗಮನವು ಯಶಸ್ಸು ಆಯುಸ್ಸು ಧನ ಇಷ್ಟಗಳನ್ನು ನಾಶಮಾಡುವುದಲ್ಲದೆ ಅತಿಕ್ರೂರವಾದ ನರಕಯಾತನೆಯನ್ನೂ ಉಂಟುಮಾ ಡುವುದು," ಎಂದು ಮಾರೀಚ ಜಟಾಯು ವಿಭೀಷಣಾದಿಗಳು ಹೇಳಿದರು. ಆದರೂ ಅವನು ಅದನ್ನು ಕೇಳದೆಹೋದುದರಿಂದ ಕೊನೆಗೆ ರಾಮನಿಂದ ಹತ ನಾದನು. ರಾವಣನು ಸತ್ತಮೇಲೆ ಅವನನ್ನು ಕುರಿತು ಅವನ ಹೆಂಡತಿಯಾದ ಮಂಡೋದರಿಯು 'ನೀನು ಆದಿಯಲ್ಲಿ ಯಾವ ಇಂದ್ರಿಯಗಳನ್ನು ಜಯಿಸಿ ಮೂರುಲೋಕಗಳನ್ನೂ ಕೈವಶಮಾಡಿಕೊಂಡಿದ್ದೆಯೋ ಆ ಇಂದ್ರಿಯ ಯಗಳೇ ಆ ದ್ವೇಷವನ್ನು ಜ್ಞಾಪಕದಲ್ಲಿಟ್ಟುಕೊಂಡಿದ್ದು ನಿನ್ನನ್ನು ಜಯಿ

ಸಿದುವೋ ಎಂಬಂತೆ ಈಗ ನೀನು ಅದೇಇಂದ್ರಿಯಗಳಿಗೆ ವಶನಾಗಿ ಈ ದುರ್ದಶೆಗೆ ಗುರಿಯಾದೆ, ' ಎಂದು ಪ್ರಲಾಪಿಸಿದಳು. ಇಂದ್ರಿಯನಿಗ್ರಹವಿಲ್ಲದ್ದರಿಂದ ರಾವಣನಿಗೂ ಇಂಥ ದುರ್ದಶೆ ಬಂದಿತು. ದೇವೇಂದ್ರ ರಾವಣರ ಪಾಡೇ ಹೀಗಿರುವಾಗ ಸಾಮಾನ್ಯರಾದ ಮನುಷ್ಯರ ಪಾಡನ್ನು ಹೇಳತಕ್ಕದ್ದೇನು ?

ಆದರೆ ದೇವೇಂದ್ರ ರಾವಣರಿಗೆ ಆದ ಹಾಗೆ ಮನುಷ್ಯರಾದ ನಮ್ಮಗಳಿಗೆ ಆದೀತೇ ಎಂದು ಕೆಲವರು ಭಾವಿಸಬಹುದು ; ಮನುಷ್ಯರಾದ ನಮ್ಮಗಳಿಗೆ ಅವರಿಗಿಂತಲೂ ಹೆಚ್ಚಾಗಿಯೇ ಆಗುವುದು. ಈ ದುಷ್ಟಕೃತ್ಯವನ್ನು ಮಾಡತಕ್ಕಂಥವರಿಗೆ ಕೆಟ್ಟ ರೋಗಗಳಿಂದ ಅಂಗವಿಕಾರಗಳೂ, ರಹಸ್ಯವಾಗಿ ವಿವಿಧವಾದ ಪ್ರಹಾರಗಳೂ, ಕೊನೆಗೆ ಮರಣವೂ ಸಂಭವಿಸುವುವಲ್ಲದೆ ಈ ಪಾಪಕೃತ್ಯಕ್ಕಾಗಿ ಲೋಕಾಂತರದಲ್ಲಿ ಶಿಕ್ಷೆಯೂ ತಪ್ಪದೆ ಆಗುವುದು. ಇದಲ್ಲದೆ ವಿವಾಹಕಾಲದಲ್ಲಿ ಕನ್ಯೆಯ ತಂದೆಯು ವರನನ್ನು ಕುರಿತು ' ಮನೋವಾಕ್ಕಾಯಗಳಲ್ಲಿಯೂ ಇವಳನ್ನು ನೀನು ಧರ್ಮದಲ್ಲಿಯೂ ಅರ್ಥದಲ್ಲಿಯೂ ಕಾಮದಲ್ಲಿಯೂ ಅತಿಕ್ರಮಿಸಕೂಡದು, ' ಎಂದು ಅಗ್ನಿಸಾಕ್ಷಿಯಾಗಿ ಹೇಳಿದುದಕ್ಕೆ ನಾನು ಅತಿಕ್ರಮಿಸುವುದಿಲ್ಲವೆಂದು ಪ್ರಮಾಣಮಾಡಿ ಅದನ್ನುಲ್ಲಂಘಿಸುವುದು ಮಹಾಪಾಪವಲ್ಲವೆ ? ಈ ಪಾಪಕೃತ್ಯಕ್ಕೆ ಎಂದಿಗೂ ಶಿಕ್ಷೆಯಿಲ್ಲದೆ ಹೋಗುವುದಿಲ್ಲ.

ಇದು ಹಾಗಿರಲಿ. ವಿವಾಹವಿಲ್ಲದಿರತಕ್ಕವರು ತಾವು ಇಂಥ ಪ್ರತಿಜ್ಞೆಯನ್ನು ಮಾಡಿಲ್ಲವಾದಕಾರಣ ತಮ್ಮ ಮನಸ್ಸು ಬಂದಂತೆ ನಡೆಯಬಹುದೆಂದು ಭಾವಿಸಬಹುದು ಇದು ದೊಡ್ಡ ತಪ್ಪು. ಜಿತೇಂದ್ರಿಯರಾಗಿ ಸದಾ ಬ್ರಹ್ಮಧ್ಯಾನೈಕ ಪರಾಯಣರಾಗಿರುವುದಕ್ಕೆ ಶಕ್ತಿಯಿದ್ದರೆ ವಿವಾಹವನ್ನು ಮಾಡಿಕೊಳ್ಳದಿರಬಹುದು. ಆದರೆ ಇಂಥ ಶಕ್ತಿಯು ಬಹಳದುರ್ಲಭವು. ಇಂದ್ರಿಯಗ್ರಾಮಗಳು ಪ್ರಾಯಶಃ ಅಜಯ್ಯವಾದುವುಗಳು. ದೇಹಪುಷ್ಟಿಯೂ

ಸಂಪತ್ತೂ ಇರತಕ್ಕವರು ವಿವಾಹವನ್ನು ಮಾಡಿಕೊಳ್ಳದಿದ್ದರೆ ಅವರು ಉಚ್ಛೃಂಖಲಪ್ರವೃತ್ತರಾಗುವುದು ಸಹಜವಾಗಿರುತ್ತದೆ. "ಗಾಳಿ ನೀರು ಎಲೆಗಳನ್ನು ತಿಂದುಕೊಂಡು ಕಾಯಕ್ಲೇಶಪಡುತ್ತಲಿದ್ದ ವಿಶ್ವಾಮಿತ್ರಪರಾಶರಾದಿ ಋಷಿಗಳುಕೂಡ ಸ್ತ್ರೀಯರ ಮುಖದರ್ಶನಮಾತ್ರದಿಂದಲೇ ಮೋಹಪರವಶರಾದರು. ಹೀಗಿರುವಾಗ ಬಳ್ಳಿಯ ಸಣ್ಣಕ್ಕಿಯನ್ನ ಹಾಲು ಮೊಸರು ತುಪ್ಪ ಮುಂತಾದುವುಗಳನ್ನು ಭುಜಿಸುವ ಪಾಮರರು ಜಿತೇಂದ್ರಿಯರಾದರೆ ವಿಂಧ್ಯಪರ್ವತವು ಸಮುದ್ರದಲ್ಲಿ ತೇಲುವುದು," ಎಂದು ನಮ್ಮ ಹಿರಿಯರು ಹೇಳಿದ್ದಾರೆ. ಇನ್ನೂ ಈ ವ್ಯಭಿಚಾರದಿಂದ ಬರತಕ್ಕ ಅನೇಕವಾದ ಅನರ್ಥಪರಂಪರೆಗಳು ಅನುಭವಸಿದ್ಧವಾಗಿಯೇ ಇರುತ್ತವೆ. ಆದುದರಿಂದ ಸ್ತ್ರೀಪುರುಷರು ಅನುರೂಪರಾದವರನ್ನು ವಿವಾಹಮಾಡಿಕೊಂಡು ವ್ಯಭಿಚರಿಸದಿದ್ದರೆ ಅಂಥವರಿಗೆ ಲೋಕದಲ್ಲಿ ಗೌರವವೂ ಮಾನವೂ ಕೀರ್ತಿಯೂ ಸರ್ವವಿಧವಾದ ಆನುಕೂಲ್ಯವೂ ಉಂಟಾಗುವುವು.

---

## ಮೇಲುವಿಚಾರಣೆ.

ಪ್ರತ್ಯಹಂ ಪತ್ಯವೇಕ್ಷೇತ ಕಾರ್ಯಜಾತಂ ಪುಮಾನ್ ಸ್ವಯಂ |
ತದಭಾವೇ ತು ತತ್ ಸರ್ವಂ ನಶ್ಯತ್ಯೇವ ನ ಸಂಶಯಃ ||

ಲೋಕದಲ್ಲಿ ಜನರು ಸಾಮಾನ್ಯವಾದ ಕೆಲಸವನ್ನುಪಕ್ರಮಿಸಿದರೆ ತಾವೇ ನೋಡಿಕೊಂಡು ಸಮರ್ಪಕವಾಗಿ ನೆರವೇರಿಸುವರು. ಕೆಲಸವು ಭಾರಿಯಾಗಿಯೂ ಅನೇಕಶಾಖೆಗಳುಳ್ಳದಾಗಿಯೂ ಅಥವಾ ಉಪಕ್ರಮಿಸಲ್ಪಟ್ಟ ಕೆಲಸಗಳು ಬಹಳವಾಗಿಯೂ ಇದ್ದಲ್ಲಿ ಅವುಗಳನ್ನೆಲ್ಲಾ ಯಜಮಾನನಾದವನೊಬ್ಬನೇ ನೋಡಿಕೊಳ್ಳುವುದಕ್ಕಾಗುವುದಿಲ್ಲವಾದಕಾರಣ ಇದಕ್ಕಾಗಿ ಒಬ್ಬೊಬ್ಬ ಮುಖಂಡನನ್ನು ಇಟ್ಟುಕೊಂಡು ಅವನ ವಿಚಾರಣೆಗೆ

ಅವುಗಳನ್ನೊಳಪಡಿಸಿ, ಅವನಮೇಲೆ ತಾವೂ ನೋಡಿಕೊಳ್ಳುತ್ತಲಿರುವರು. ಹೀಗೆ ಮುಖಂಡರಾಗಿ ನಿಯಮಿಸಲ್ಪಟ್ಟವರು ಎಷ್ಟೇಯೋಗ್ಯರಾಗಿದ್ದರೂ ತಮ್ಮ ಸ್ವಂತಕೆಲಸವನ್ನು ನೋಡುವಷ್ಟು ಶ್ರದ್ಧೆಯಿಂದ ಯಜಮಾನನ ಕೆಲಸವನ್ನು ನೋಡುವುದು ಅಪೂರ್ವ. ಪ್ರಾಯಶಃ ಮುಖಂಡರಾದವರು ತಾವು ನೋಡತಕ್ಕ ಕೆಲಸಗಳಿಂದ ತಮ್ಮ ಸಂಪಾದನೆಯನ್ನು ನೋಡಿಕೊಂಡು ಯಜಮಾನನ ಆಯತಿಯ ವಿಷಯದಲ್ಲಿ ಉದಾಸೀನರಾಗಿರುವವರೇ ಹೆಚ್ಚು. ಇದರಿಂದಲೇ ಲೋಕದಲ್ಲಿ "ತಾನು ಮಾಡುವುದುತ್ತಮ, ಮಗ ಮಾಡುವುದು ಮಧ್ಯಮ, ಆಳು ಮಾಡುವುದು ಹಾಳು" ಎಂಬ ಗಾದೆಯುಂಟಾಗಿದೆ.

ಎಲ್ಲರಿಗೂ ತಮ್ಮ ಕೆಲಸವನ್ನು ತಾವೇ ಮಾಡುವುದರಿಂದ ಅವುಗಳ ಪೂರ್ವಾಪರಸಂದರ್ಭಗಳು ಗೊತ್ತಾಗುವುವು. ಒಂದುವೇಳೆ ಹಿಡಿದ ಕೆಲಸಗಳು ಫಲದಾಯಕವಾಗದೆ ಕೆಡುವ ಸಂದರ್ಭ ಬಂದಲ್ಲಿ ಅವುಗಳಿಂದ ನಷ್ಟ ಸಂಭವಿಸದಿರುವಹಾಗೆ ಯಾವಯಾವ ಕಾಲಗಳಲ್ಲಿ ಏನೇನು ಪ್ರಯತ್ನಗಳನ್ನು ಮಾಡಬೇಕೋ ಅವುಗಳನ್ನೆಲ್ಲಾ ನೋಡಿಕೊಂಡು ಮಾಡುವುದಕ್ಕೆ ಯಜಮಾನನಾದವನು ಪ್ರಯತ್ನಿಸುವನು. ಮುಖಂಡನಾದವನು ಯಜಮಾನನಂತೆ ಸಂದರ್ಭಸಂಯೋಗಗಳನ್ನು ಅರಿತು ಶ್ರದ್ಧೆಯಿಂದ ಕೆಲಸಮಾಡುವುದು ಅಪೂರ್ವ. ಆದುದರಿಂದ ತಮ್ಮ ಕೆಲಸಗಳನ್ನು ಇತರರಿಂದ ಮಾಡಿಸಬೇಕಾದ ಸಂದರ್ಭವಿರತಕ್ಕವರು ಹಿಡಿದ ಕೆಲಸಗಳ ಪೂರ್ವಾಪರಸಂದರ್ಭಗಳನ್ನು ಆಗಾಗ ಶ್ರದ್ಧೆಯಿಂದ ಪರಿಶೀಲಿಸುತ್ತ ಮಧ್ಯದಲ್ಲಿ ಸಂಭವಿಸುವ ದೋಷಗಳಿಗೆ ಜಾಗ್ರತೆಯಾಗಿ ತಕ್ಕ ಪ್ರತಿಕ್ರಿಯೆಗಳನ್ನು ಮಾಡುತ್ತ ಮೇಲುವಿಚಾರಣೆಯನ್ನು ಇಟ್ಟುಕೊಂಡಲ್ಲಿ ವೃದ್ಧಿಗೆಬರುವರು.

# ತಂದೆತಾಯಿಗಳ ಕರ್ತವ್ಯ.

ಮಾತಾ ಶತ್ರುಃ ಪಿತಾ ವೈರೀ ಯೇನ ಬಾಲೋ ನ ಪಾಠಿತಃ |
ಪಿತೃಭ್ಯಾಂ ಬಾಲಕಾಸ್ತಸ್ಮಾತ್ ಶಿಕ್ಷಣೀಯಾಃ ಪ್ರಯತ್ನತಃ ||

ಲೋಕದಲ್ಲಿ ಜನರಿಗೆ ತಂದೆತಾಯಿಗಳಿಗಿಂತ ವಿಶ್ವಾಸವುಳ್ಳವರಾಗಿಯೂ ಹಿತಚಿಂತಕರಾಗಿಯೂ ಇರುವವರು ಯಾರೂ ಇಲ್ಲ. ಇವರು ತಮ್ಮ ಮಕ್ಕಳು ವೃದ್ಧಿಗೆಬಂದರೆ ಸಾಕೆಂದು, ಜನ್ಮಾರಭ್ಯ ಅವರಿಗೋಸ್ಕರ ಮಾಡತಕ್ಕ ಕೆಲಸಗಳನ್ನು ಆಸಕ್ತಿಯಿಂದ ಮಾಡಬೇಕೆಂಬ ಮನೋರಥವುಳ್ಳವರಾಗಿರುವರು. ಆದರೆ, ನಾಮಕರಣ ಚೌಲ ಉಪನಯನ ಮೊದಲಾದುವುಗಳಿಗೆ ಎಷ್ಟು ಆವಶ್ಯಕವೋ ಅದಕ್ಕಿಂತಲೂ ಹೆಚ್ಚಾಗಿ ವ್ಯಯಮಾಡುವ ವಿಷಯದಲ್ಲಿ ತಂದೆತಾಯಿಗಳು ಹಿಂಜರಿಯುವುದಿಲ್ಲ. ಅಂಥ ವೆಚ್ಚಗಳಲ್ಲಿ ಶತಾಂಶದಲ್ಲಿ ಒಂದನ್ನಾದರೂ ವಿದ್ಯಾಭ್ಯಾಸಕ್ಕೆ ವಿನಿಯೋಗಿಸತಕ್ಕವರು ಕಡಿಮೆಯಾಗಿರುತ್ತಾರೆ. ಕೆಲವರು ತಮ್ಮ ಮಕ್ಕಳ ವಿದ್ಯಾಭ್ಯಾಸದ ವಿಷಯದಲ್ಲಿ ತಮ್ಮ ಶಕ್ತಿಯನ್ನು ಮೀರಿ ವ್ಯಯಮಾಡಬೇಕೆಂಬ ಕುತೂಹಲವನ್ನು ಮನಸ್ಸಿನಲ್ಲಿಟ್ಟುಕೊಂಡಿರಬಹುದು; ಆದರೆ ಅದಕ್ಕೆ ತಕ್ಕಂತೆ ಕಾರ್ಯತಃ ಮಾಡತಕ್ಕವರು ವಿರಳವಾಗಿರುವರು.

ಉಪಪತ್ತಿಯುಳ್ಳವರುಕೂಡ ಸದ್ಯಕ್ಕೆ ಫೀಜುಕೊಡುವುದು ತಪ್ಪಿದರೆ ಅದೊಂದಿಷ್ಟು ದುಡ್ಡು ನಿಲ್ಲುವುದೆಂದು ಮನಸ್ಸಿನಲ್ಲಿ ಯೋಚಿಸುತ್ತ ಪಾಠಶಾಲೆಯ ಅಧ್ಯಕ್ಷರಲ್ಲಿ ಸಾಹಸಮಾಡಿ ನೋಡೋಣವೆಂದು ಬಂದು "ಸ್ವಾಮಿ, ನಾನು ಬಹಳಬಡವ, ನಮ್ಮ ಹುಡುಗನಿಗೆ ಫೀಜುಕೊಡುವುದಕ್ಕೆ ಮಾರ್ಗವಿಲ್ಲ. ದಯವಿಟ್ಟು ಫೀಜುಮಾಫ್‌ಮಾಡಿಸಿಕೊಟ್ಟು ವಿದ್ಯಾದಾನಮಾಡಿಸಿ ನಮ್ಮನ್ನು ಉದ್ಧಾರಮಾಡಬೇಕು. ಮುಖ್ಯ ಈ ಕೀರ್ತಿಯು ತಮ್ಮ ಪಾಲಿಗೆ ಸೇರಿದ್ದು," ಎಂದು ಹೇಳಿಕೊಂಡು, ಅದರಿಂದ ಪ್ರಯೋಜನವಾಗದಿದ್ದರೆ ಮಗನ

ವಿದ್ಯಾಭ್ಯಾಸದವಿಷಯದಲ್ಲಿ ಹಿಂಜರಿದು, ಅದೇಕಾಲದಲ್ಲಿ ಆ ಹುಡುಗನಿಗೆ ಸಾಲ ಸೋಲಗಳನ್ನಾದರೂ ಮಾಡಿ ಮದುವೆಮಾಡುವುದಕ್ಕೆ ತಕ್ಕ ಸನ್ನಾಹ ಗಳನ್ನು ಮಾಡುತ್ತಾ ಕುಟುಂಬದ ಜೀವನಕ್ಕೆ ಆಧಾರವಾಗಿರುವ ಗ್ರಾಮ ಭೂಮಿಗಳನ್ನಾದರೂ ಒತ್ತೆಯಿಟ್ಟು ಆ ಕಾರ್ಯವನ್ನು ನಿರ್ವಹಿಸುವರು. ಇಷ್ಟಾದರೂ ಮಗನಿಗೂ ಅವನ ಕುಟುಂಬದವರಿಗೂ ಅಭಿವೃದ್ಧಿಗೆ ಸಾಧಕ ವಾದ ವಿದ್ಯಾಬುದ್ಧಿಗಳನ್ನು ಕಲಿಸುವವಿಷಯದಲ್ಲಿಮಾತ್ರ ಹಿಂದೆಗೆಯುವರು.

ಈ ವಿಷಯದಲ್ಲಿ ಇಂಗ್ಲೀಷರು ನಮಗಿಂತ ಎಷ್ಟೋ ಉತ್ತಮರಾಗಿರು ವರು. ಅವರಲ್ಲಿ ತಂದೆತಾಯಿಗಳು ಮಕ್ಕಳನ್ನು ಸಾಕಿ ಅವರಿಗೆ ವಿದ್ಯಾಭ್ಯಾಸ ವನ್ನು ಮಾಡಿಸಿ ಆಮೇಲೆ ಯಾವುದಾದರೂ ಒಂದು ವೃತ್ತಿಯಲ್ಲಿ ಪ್ರವೇಶವ ನ್ನುಂಟುಮಾಡಿಸಿ ಅದರ ಸಹಾಯದಿಂದ ಅವರು ಸ್ವತಂತ್ರವಾಗಿ ಬದುಕುವಂತೆ ಮಾಡುವುದಕ್ಕೋಸ್ಕರ ತಾವು ಎಷ್ಟು ಕಷ್ಟವನ್ನಾದರೂ ಪಡುವರು. ಸ್ವಸಾ ಮರ್ಥ್ಯದಿಂದ ಜೀವಿಸುವುದಕ್ಕೆ ಶಕ್ತಿಯಿಲ್ಲದವರಿಗೆ ವಿವಾಹಮಾಡಿ ದಂಪತಿಗ ಳಿಬ್ಬರನ್ನೂ ಪರತಂತ್ರರನ್ನಾಗಿ ಮಾಡುವುದು ನಿಂದ್ಯವಾದುದೆಂದು ಭಾವಿಸದಿ ರತಕ್ಕ ಜನರೇ ಅವರಲ್ಲಿ ಅಪೂರ್ವ. ಬಾಲೆಯರುಕೂಡ ಧನವನ್ನಾರ್ಜಿಸು ವುದಕ್ಕೆ ಶಕ್ತಿಯಿಲ್ಲದವನನ್ನು ವಿವಾಹಮಾಡಿಕೊಳ್ಳುವುದಿಲ್ಲ. ಅವರು ಈಪ್ರ ಕಾರವಿರುವುದರಿಂದಲೇ ನಮಗಿಂತ ಎಷ್ಟೋ ಉತ್ತಮಸ್ಥಿತಿಯಲ್ಲಿರುವರು.

ನಮ್ಮಲ್ಲಿ ಅನೇಕರು "ನಮ್ಮ ಮಕ್ಕಳ ಹಣೆಯಲ್ಲಿ ನಾವು ಬರೆದಿದ್ದೇ ವೆಯೆ? ನಮ್ಮ ತಂದೆಗಳು ನಮಗೇನುಮಾಡಿದ್ದರು? ಈ ವೂರಿನಲ್ಲಿ ಅವನ ಮಗ ಈಗ ಹೇಗೆ ಬದುಕುತ್ತಲಿದ್ದಾನೆ? ಅವನ ತಂದೆ ಅವನಿಗೇನುಮಾ ಡಿದ್ದನು? ಇದೆಲ್ಲಾ ಹುಚ್ಚು. ಅವನ ಹಣೆಯಲ್ಲಿ ಬರೆದಂತೆ ಅವನಿಗೆ ಆಗು ತ್ತದೆ ಅದಕ್ಕೆ ನಾವು ಬಾಧ್ಯರೆ?" ಎಂಬುದಾಗಿ ಮನಸ್ಸುಬಂದಂತೆ ಆಡುತ್ತ, ಮಕ್ಕಳ ವಿದ್ಯಾಭ್ಯಾಸಕ್ಕೂ ಪುರೋವೃದ್ಧಿಗೂ ಅನುಕೂಲವಾದ ಬಾಲ್ಯ ವನ್ನು ವ್ಯರ್ಥವಾಗಿ ಕಳೆಯುವಂತೆ ಮಾಡಿ "ನಮ್ಮ ಹೊಟ್ಟೆಯಲ್ಲಿ ಹುಟ

ದ್ದಕ್ಕೆ ಉಪನಯನ ವಿವಾಹಗಳನ್ನು ಮಾಡಬೇಕಾದದ್ದು ನಮ್ಮ ಮುಖ್ಯ ಕೆಲಸ. ದೇವರು ನಮಗೆ ಶಕ್ತಿಯನ್ನು ಕೊಟ್ಟಿರುವಾಗ ಯಾಚನೆಯನ್ನಾಗಲೀ ಭಿಕ್ಷೆಯನ್ನಾಗಲೀ ಸಾಲವನ್ನಾಗಲೀ ಮಾಡಿ ಕಾರ್ಯನಿರ್ವಾಹಮಾಡಿಬಿಟ್ಟರೆ ನಮ್ಮ ಕೆಲಸವಾಗಿಯಿತು. ಅವನು ಅವನ ಹೆಂಡತಿಮಕ್ಕಳಿಗೆ ಭಿಕ್ಷವನ್ನಾದರೂ ಎತ್ತಿಕೊಂಡುಬಂದು ಹಾಕುತ್ತಾನೆ," ಎಂಬುದಾಗಿ ವಿವಾಹಪ್ರಯತ್ನವನ್ನು ಮಾಡುವರೇ ಹೊರತು ಪುರೋವೃದ್ಧಿಗೆ ಸಾಧಕವಾದ ವಿದ್ಯಾಭ್ಯಾಸದ ವಿಷಯದಲ್ಲಿ ಅಷ್ಟು ಶ್ರದ್ಧೆಯನ್ನು ವಹಿಸುವುದಿಲ್ಲ.

ಇವರು ಹೀಗೆ ಮಾಡುವುದರಿಂದ ಮಕ್ಕಳು ದೊಡ್ಡವರಾದಮೇಲೆ 'ಅಯ್ಯೋ ನಮ್ಮ ತಂದೆತಾಯಿಗಳೇ ನಮ್ಮ ತಲೆಯಮೇಲೆ ಕಲ್ಲುಹಾಕಿದರು. ನಮಗಾದರೆ ಬಾಲ್ಯಾವಸ್ಥೆಯಲ್ಲಿ ಉತ್ತರತ್ರ ಆಗಬೇಕಾದ ಯೋಚನೆಗಳು ತೋರದೆ ಹೋದುವು. ಅವರು ನಮ್ಮ ಕುಟುಂಬದವರ ವೃದ್ಧಿಗೆ ಬೇಕಾದುದನ್ನು ಯೋಚಿಸದೆ ಮದುವೆಯನ್ನುಬೇರೆ ಮಾಡಿ ನಮ್ಮನ್ನು ತಾಪತ್ರಯಗಳಿಗೆ ಗುರಿಮಾಡಿದರೇಹೊರತು ನಾವು ಚೆನ್ನಾಗಿ ಬದುಕುವುದಕ್ಕೆ ಮಾರ್ಗಮಾಡಲಿಲ್ಲ. ಏನುಮಾಡುವುದು?' ಎಂಬುದಾಗಿ ಹೇಳಿಕೊಂಡು ಬಹಳವಾಗಿ ವ್ಯಸನಪಡುವರು. ಪ್ರಾಯಶಃ ತಂದೆತಾಯಿಗಳು ಹಾಕಿದ ಅಸ್ತಿಭಾರದಂತೆಯೇ ಆ ಕುಟುಂಬದ ಕೆಲಸಗಳು ನಡೆಯತಕ್ಕುವಾಗಿರುತ್ತವೆ. ಆದುದರಿಂದ ಹುಡುಗರಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸಮಾಡಿಸಿ ಅನಂತರ ಅವರು ಯಾವ ವೃತ್ತಿಯಲ್ಲಿ ಪ್ರವರ್ತಿಸಿದರೆ ಚೆನ್ನಾಗಿ ವೃದ್ಧಿಗೆ ಬರುವರೋ ಅದನ್ನು ಪರಿಶೀಲಿಸಿ ಅದರಲ್ಲಿ ಪ್ರವೇಶವನ್ನುಂಟುಮಾಡಿಸಬೇಕಾದುದು ತಂದೆತಾಯಿಗಳ ಮುಖ್ಯ ಕರ್ತವ್ಯವಾಗಿರುವುದು.



# ವಿದ್ಯೆ.

ವಿದ್ಯಾ ನಾಮ ನರಸ್ಯ ರೂಪಮಧಿಕಂ ಪ್ರಚ್ಛನ್ನಗುಪ್ತಂ ಧನಂ
ವಿದ್ಯಾ ಭೋಗಕರೀ ಯಶಸ್ಸುಖಕರೀ ವಿದ್ಯಾ ಗುರೂಣಾಂ ಗುರುಃ |
ವಿದ್ಯಾ ಬಂಧುಜನೋ ವಿದೇಶಗಮನೇ ವಿದ್ಯಾ ಪರಾ ದೇವತಾ
ವಿದ್ಯಾ ರಾಜಸು ಪೂಜ್ಯತೇ ನ ಹಿ ಧನಂ ವಿದ್ಯಾವಿಹೀನಃ ಪಶುಃ ||

ವಿದ್ಯೆಯು ತಿಳವಳಿಕೆಯುಂಟಾಗುವುದಕ್ಕೆ ಸಾಧಕವಾದದ್ದು. ಇದು ಅಭ್ಯಾಸಾನುಸಾರವಾಗಿ ಸ್ವಾಧೀನಕ್ಕೆ ಬರತಕ್ಕದ್ದಾಗಿದೆ. ವಿದ್ಯೆಯು ಜನರಿಗೆ ದೇವತೆಯಾಗಿಯೂ ವಿಶೇಷಸೌಂದರ್ಯದಾಯಕವಾಗಿಯೂ, ಸಕಲ ಭೋಗಗಳಿಗೂ ಸಾಧಕವಾಗಿಯೂ, ಯಶಸ್ಸನ್ನೂ ಸುಖವನ್ನೂ ಕೊಡತಕ್ಕದಾಗಿಯೂ, ಗುರುವಿಗೆ ಗುರುವಾಗಿಯೂ, ದೇಶಾಂತರಗಳಲ್ಲಿ ಬಂಧುವಾಗಿಯೂ, ರಾಜರುಗಳಲ್ಲಿ ಧನಕ್ಕಿಂತಲೂ ಪೂಜ್ಯವಾಗಿಯೂ ಇರುವುದು. ಇದಲ್ಲದೆ ದುಃಖಕಾಲದಲ್ಲಿ ವೈರಾಗ್ಯಪ್ರದವಾದ ಗ್ರಂಥಗಳ ಅವಲೋಕನದಿಂದ ದುಃಖಗಳನ್ನು ಮರೆಯುವುದಕ್ಕೂ, ಸಂತೋಷಕಾಲಗಳಲ್ಲಿ ಉತ್ಸಾಹವನ್ನು ವಿಶೇಷವಾಗಿ ವೃದ್ಧಿಮಾಡುವುದಕ್ಕೆ ಸಾಧಕಗಳಾದ ಗ್ರಂಥಗಳ ಅವಲೋಕನದಿಂದ ಆನಂದವನ್ನು ವೃದ್ಧಿಮಾಡಿಕೊಳ್ಳುವುದಕ್ಕೂ ಸಾಧಕವಾಗಿರುವುದು. ಆದುದರಿಂದಲೇ ವಿದ್ಯಾವಿಹೀನನಾದವನು ಪಶುವಿಗೆ ಸಮಾನನೆಂದು ಹೇಳಲ್ಪಡುವನು.

ವಿದ್ಯೆಯು ಅನೇಕಶಾಖೆಗಳುಳ್ಳದಾಗಿರುವುದು. ಅವುಗಳಲ್ಲೆಲ್ಲಾ ಓದುವುದು, ಬರೆಯುವುದು, ಲೆಕ್ಕಮಾಡುವುದು ಇವು ಮುಖ್ಯವಾದ ಭಾಗಗಳಾಗಿರುವುವು. ಎಲ್ಲಾ ಲೌಕಿಕ ವೈದಿಕ ವ್ಯಾಪಾರಗಳಲ್ಲಿಯೂ ಇವುಗಳ ಆವಶ್ಯಕತೆಯು ಬಹಳವಾಗಿರುವುದು. ಓದು ಬರಹ ಲೆಕ್ಕಗಳು ಎಲ್ಲಾ ವಿದ್ಯೆಗಳಲ್ಲಿಯೂ ಪ್ರವೇಶದಾಯಕಗಳಾಗಿಯೂ ಎಲ್ಲಾ ವೃತ್ತಿಗಳಲ್ಲಿಯೂ ಫಲದಾಯಕಗಳಾಗಿಯೂ ಆಗುವುವು. ಇವುಗಳಲ್ಲಿ ಪ್ರವೇಶವಿಲ್ಲದವರು

ಯಾವ ವಿದ್ಯೆಯನ್ನುಪಕ್ರಮಿಸಿದರೂ, ಯಾವ ವೃತ್ತಿಯನ್ನವಲಂಬಿಸಿದರೂ, ಅವುಗಳಲ್ಲಿ ಸಂಪೂರ್ಣವಾದ ಫಲವನ್ನು ಹೊಂದುವುದಕ್ಕಾಗುವುದಿಲ್ಲ. ಫಲದಾಯಕವಾದ ಅನೇಕವೃತ್ತಿಗಳು ಆಚರಣೆಯಲ್ಲಿರುತ್ತವೆ. ಓದುಬರ ಹಗಳನ್ನು ಬಲ್ಲವರಿಗೆ ಅವುಗಳ ವಿಷಯಗಳು ಲೇಖನಗಳಿಂದಲೂ ವರ್ತ ಮಾನಪತ್ರಿಕೆ ಮೊದಲಾದುವುಗಳಿಂದಲೂ ತಿಳಿಯುವುದಕ್ಕೆ ಅವಕಾಶವಾಗು ತ್ತದೆ. ಅವುಗಳಲ್ಲಿ ಪರಿಚಯವಿಲ್ಲದವರಿಗೆ ಇವು ಸಮಗ್ರವಾಗಿ ತಿಳವಳಿಕೆಗೆ ಬರುವುದು ಕಷ್ಟ.

ಪ್ರತಿಯೊಂದು ವಿದ್ಯೆಯಲ್ಲಿಯೂ ವೃತ್ತಿಗಳಲ್ಲಿಯೂ ಚೆನ್ನಾಗಿ ತಿಳ ವಳಿಕೆಯುಳ್ಳವರಿಗೆ ಇಷ್ಟಾರ್ಥಸಿದ್ಧಿಗೆ ಅವಕಾಶವು ವಿಶೇಷವಾಗಿರುವುದು. ವರ್ತಕತನವೇ ಮೊದಲಾದ ವೃತ್ತಿಗಳಿಂದ ಜೀವಿಸತಕ್ಕವರಿಗೆ ಓದು ಬರಹ ಲೆಕ್ಕಗಳ ಪ್ರಯೋಜನವು ಬಹಳವಾಗಿರುವುದು. ಯಾವ ಪದಾರ್ಥಗಳು ಯಾವ ಪ್ರಾಂತಗಳಲ್ಲಿ ಅಗ್ಗವಾಗಿರುವುವೋ, ಯಾವ ಪ್ರಾಂತಗಳಲ್ಲಿ ತಗ್ಗಾ ಗಿರುವುವೋ ಅವುಗಳೆಲ್ಲಾ ಓದುಬರಹಬಲ್ಲವರಿಗೆ ತಂತೀವರ್ತಮಾನ, ಲೇಖನ, ವರ್ತಮಾನಪತ್ರಿಕೆಗಳು ಇವೇ ಮೊದಲಾದುವುಗಳ ಮೂಲಕ ವಾಗಿ ತಿಳಿಯುವುದಕ್ಕೆ ಅವಕಾಶವಾಗುವುದು. ಈ ವಿಧವಾದ ತಿಳವಳಿಕೆಯ ಸಹಾಯದಿಂದ ಲಾಭವೂ ವಿಶೇಷವಾಗಿ ಉಂಟಾಗುವುದು.

ಪ್ರತಿಯೊಂದು ವೃತ್ತಿಯಲ್ಲಿಯೂ ಅದರ ಮರ್ಮಗಳನ್ನು ತಿಳಿದು ಕೊಳ್ಳುವುದಕ್ಕೆ ಓದು ಬರಹಗಳೂ ಅವುಗಳಿಂದುಂಟಾಗತಕ್ಕ ಪೂರ್ವಾಪರ ಜ್ಞಾನವೂ ಹೇಗೆ ಸಾಧಕಗಳಾಗಿರುತ್ತವೆಯೋ ಹಾಗೆಯೇ ಆ ಕೆಲಸದ ಲಾಭ ನಷ್ಟಗಳನ್ನು ವಿಶದವಾಗಿ ತೋರಿಸುವುದಕ್ಕೆ ಲೆಕ್ಕವೂ ಸಾಧಕವಾಗಿರುವುದು. ಓದು ಬರಹ ಲೆಕ್ಕಗಳನ್ನರಿಯದವರು ತಾವು ಅವಲಂಬಿಸಿರತಕ್ಕ ವೃತ್ತಿಗಳ ವಿಷಯ ಲೆಕ್ಕಪತ್ರಗಳನ್ನೂ ಗುಮಾಸ್ತ ಮೊದಲಾದವರಿಂದ ಇಡಿಸಬೇಕಾಗು ತ್ತದೆ. ಹೀಗೆ ಅಕ್ಷರಜ್ಞಾನವಿಲ್ಲದ ಯಜಮಾನನಿಗೆ ಆ ಜನರು ಮೋಸ

ಮಾಡದಿರುವುದು ಅಪೂರ್ವ. ಆದುದರಿಂದ ಓದು ಬರಹ ಲೆಕ್ಕಗಳಲ್ಲಿ ವಿಶೇಷ ಪಾಂಡಿತ್ಯವನ್ನು ಸಂಪಾದಿಸದಿದ್ದರೂ, ತಾವು ಅವಲಂಬಿಸಿರತಕ್ಕ ವೃತ್ತಿಗೆ ಸಂಬಂಧಪಟ್ಟ ಲೆಕ್ಕ ಪತ್ರಗಳ ಮರ್ಮಗಳನ್ನು ತಿಳಿದುಕೊಳ್ಳುವಷ್ಟಾದರೂ ಕಲಿತುಕೊಂಡಿರತಕ್ಕುದು ಪ್ರತಿಯೊಬ್ಬನಿಗೂ ಅತ್ಯಂತ ಆವಶ್ಯಕವಾದುದು.

---

## ವೃತ್ತಿಗಳು.

ಸ್ವಾನುರೂಪಾಂ ಶುಭಾಂ ವೃತ್ತಿಂ ಪರೀಕ್ಷ್ಯೈತಾಂ ಸಮಾಶ್ರಯೇತ್ |
ತದಭಾವೇ ನರಃ ಸೀದೇತ್ ಮೃತ್ಯುಂ ಚ ಪ್ರಾಪ್ನುಯಾದ್ಧ್ರುವಂ ||

ಲೋಕದಲ್ಲಿ ವ್ಯವಸಾಯ, ಶಿಲ್ಪ, ಚಿತ್ರ, ವೈದ್ಯ, ಬಡಿಗೆ, ಹೊಲಿಗೆ, ಯಂತ್ರಸಂಬಂಧದಿಂದ ಮಾಡತಕ್ಕ ಕೆಲಸ, ಕಬ್ಬಿಣಗೆಲಸ, ಚಿನ್ನದಕೆಲಸ, ನೇಯ್ಗೆ ಇವೇ ಮೊದಲಾದ ಬಗೆಬಗೆ ವೃತ್ತಿಗಳಿರುವುವು. ಅವುಗಳಲ್ಲಿ ಒಬ್ಬೊಬ್ಬರು ಒಂದೊಂದು ವೃತ್ತಿಯನ್ನೂ, ಮತ್ತೆ ಕೆಲವರು ಎರಡುಮೂರು ವೃತ್ತಿಗಳನ್ನೂ ಅವಲಂಬಿಸುವರು. ತಾವೇ ಅಭ್ಯಾಸಮಾಡುವುದರಿಂದಲೂ, ಬಲ್ಲವರಿಂದ ಅದರ ಮರ್ಮಗಳನ್ನು ತಿಳಿದುಕೊಳ್ಳುವುದರಿಂದಲೂ ಅವುಗಳನ್ನು ಚೆನ್ನಾಗಿ ಕಲಿತುಕೊಳ್ಳುವರು. ಹೀಗೆ ಕಲಿತುಕೊಳ್ಳುವುದರಲ್ಲಿಯೂ ಅವರವರ ಮನೆಗಳಲ್ಲಿ ಅಭ್ಯಸ್ತವಾಗಿ ನಡೆವಳಿಕೆಗಳಲ್ಲಿರುವ ವೃತ್ತಿಗಳ ಪರಿಚಯವು ಅವರಿಗೆ ಸುಲಭವಾಗಿ ಬರುವುದು. ಹೇಗೆಂದರೆ,—ಸಂಗೀತಗಾರರ ಮಕ್ಕಳಿಗೆ ಸಂಗೀತವೂ, ವೈದ್ಯರ ಮಕ್ಕಳಿಗೆ ವೈದ್ಯವೂ, ವ್ಯಾಪಾರಗಾರರ ಮಕ್ಕಳಿಗೆ ವ್ಯಾಪಾರವೂ ಸುಲಭವಾಗಿ ತಿಳಿಯುವುವು. ಹೀಗೆಯೇ ಕೃಷಿ, ಬಡಿಗೆ, ನೇಯ್ಗೆ, ಹೊಲಿಗೆ, ಚಿತ್ರ ಮೊದಲಾದ ವೃತ್ತಿಗಳಿಂದ ಜೀವಿಸುವವರ ಮಕ್ಕಳಿಗೆ ಆಯಾ ವೃತ್ತಿಗಳಲ್ಲಿ ಪ್ರವೇಶವು ಸುಲಭವಾಗಿ ಆಗುವುದು. ಆದುದರಿಂದ ಯಾರಿಗೆ ಯಾವ ವೃತ್ತಿಯಲ್ಲಿ ಮನಸ್ಸು ಓಡುವುದೋ ಅದನ್ನು

ಪ್ರಥಮತಃ ಗೊತ್ತುಮಾಡಿಕೊಂಡು, ಅದರ ಅವಲಂಬನದಿಂದ ಜೀವಿಸಬೇಕಾದರೆ ಆ ವೃತ್ತಿಯಿಂದ ಮಾಡಿದ ವಸ್ತುಗಳಿಗೆ ಆ ಸ್ಥಳದಲ್ಲಿ ಪ್ರತಿಫಲವುಂಟೋ ಇಲ್ಲವೋ ನೋಡಿಕೊಂಡು ಹಿಡಿಯಬೇಕು. ಬಹುಜನರು ಇದನ್ನು ಯೋಚಿಸದೆ ಚಪಲಚಿತ್ತರಾಗಿ ಕೆಲವುದಿನ ಒಂದು ವೃತ್ತಿಯನ್ನವಲಂಬಿಸಿ, ಹಾಗೆಯೇ ಅದನ್ನು ಬಿಟ್ಟು ಮತ್ತೆ ಬೇರೆ ವೃತ್ತಿಯನ್ನವಲಂಬಿಸಲು ಹೋಗುವರು. ಹೀಗೆ ಚಪಲಚಿತ್ತರಾದವರು ಯಾವುದರಲ್ಲಿಯೂ ಕೊನೆಗಾಣದೆ ಹೋಗುವರು. ಇಂಥವರಿಗೆ ಯಾವಾಗಲೂ ಕಷ್ಟವೇಹೊರತು ಸೌಖ್ಯವುಂಟಾಗುವುದಿಲ್ಲ.

ಆದುದರಿಂದ ಸರ್ವರೂ ತಮತಮಗೆ ಯಾವಯಾವ ವೃತ್ತಿಗಳಲ್ಲಿ ವೃದ್ಧಿಗೆ ಬರುವುದಕ್ಕೆ ಅನುಕೂಲ್ಯವಿರುವುದೋ ಅದನ್ನು ಚೆನ್ನಾಗಿ ಪರ್ಯಾಲೋಚಿಸಿ ಅವಲಂಬಿಸಬೇಕು. ಅವಲಂಬಿಸಿದಮೇಲೆ ಚಪಲಚಿತ್ತರಾಗದೆ ಒಂದೇ ಮನಸ್ಸಿನಿಂದ ಅದರಲ್ಲಿ ಕೌಶಲ್ಯವನ್ನು ಸಂಪಾದಿಸಬೇಕು. ಹಾಗೆ ಕೌಶಲ್ಯವನ್ನು ಸಂಪಾದಿಸಿದವರು ತಾವು ಅವಲಂಬಿಸಿದ ವೃತ್ತಿಯಲ್ಲಿ ಮನಃಪೂರ್ವಕವಾಗಿ ಕೆಲಸಮಾಡುತ್ತ, ದುರ್ವ್ಯತ್ತಿ ದುರಾಲಾಪಗಳಲ್ಲಿ ಕಾಲವನ್ನು ಕಳೆಯದೆ, ಪ್ರಾರಂಭಿಸಿದ ಕೆಲಸವು ಸಫಲವಾಗಿ ಕೊನೆಗಾಣುವುದರಿಂದುಂಟಾಗುವ ಸಂತೋಷಾನುಭವವು ಎಂದಿಗುಂಟಾವುದೋ ಎಂದು ನಿರೀಕ್ಷಿಸಿಕೊಂಡಿರುವರು. ಯೋಗ್ಯವಾದ ವೃತ್ತಿಯನ್ನು ಅವಲಂಬಿಸದಿರುವವರು ಒಂದುವೇಳೆ ತಾವು ಯಾವತಂಟೆಗೂ ಹೋಗುವುದಿಲ್ಲವೆಂದು ಇದ್ದರೂ ಅವರ ಮನಸ್ಸು ಸುಮ್ಮನಿರುವುದಿಲ್ಲ. ಅವರಲ್ಲಿ ದಿನಕ್ರಮೇಣ ದುರ್ವೃತ್ತಿ ದುರಾಲಾಪಗಳು ನೆಲೆಗೊಳ್ಳುವುವು ಇವು ನೆಲೆಗೊಂಡನಂತರ ಅವರು ಪರರ ಹಿತಾಹಿತಗಳನ್ನೂ ತಮ್ಮ ಕೀರ್ತ್ಯಪಕೀರ್ತಿಗಳನ್ನೂ ಯೋಚಿಸದೆ ಕಾರ್ಯಗಳನ್ನು ಮಾಡುತ್ತ ಬಾಯಲ್ಲಿಮಟ್ಟಿಗೆ ಧರ್ಮವಾಗಿಯೂ ಸತ್ಯವಾಗಿಯೂ ಇರುವ ಮಾತುಗಳನ್ನಾಡುವುದಲ್ಲದೆ ಮೋಸ ಮೊದಲಾದುವುಗಳಿಂದ ಪರರ

ಸ್ವತ್ತನ್ನಪಹರಿಸಿ ಅವರಿಗೆ ಸಂತಾಪವನ್ನುಂಟುಮಾಡುವುದಕ್ಕೂ ಯತ್ನಿಸು ವರು. ಆದರೆ ಹೀಗೆ ಅತ್ಯುತ್ಕಟವಾದ ಪಾಪಗಳನ್ನು ಮಾಡತಕ್ಕರಿಗೆ ಪ್ರಾಯಶಃ ಈ ಲೋಕದಲ್ಲಿಯೇ ಶಿಕ್ಷೆಯಾಗುವುದು; ಒಂದುವೇಳೆ ಇಂಥ ಜನರು ತಾವು ಮಾಡಿದ ಮೋಸಕ್ಕೆ ಆಗಬೇಕಾದ ರಾಜದಂಡನೆಯನ್ನು ತಪ್ಪಿಸಿ ಕೊಂಡು ಸಂತೋಷಪಟ್ಟರೂ, ಅಂತರಂಗದಲ್ಲಿ ನಮ್ಮ ದುಷ್ಕೃತ್ಯವು ಎಲ್ಲಿ ಬಹಿರಂಗವಾಗುವುದೋ ಎಂಬ ಕಳವಳವು ಅವರಿಗೆ ತಪ್ಪುವುದಿಲ್ಲ. ಆದುದ ರಿಂದ ಅವರಿಗೆ ಈ ಕಳವಳವೇ ರಾಜದಂಡನೆಗಿಂತ ಪ್ರಬಲವಾದ ಶಿಕ್ಷೆಯಾ ಗುವುದು. ಇವರು ಮಾಡಿದ ತಪ್ಪಿತಗಳು ಇವರ ತಂತ್ರಗಳಿಂದ ನ್ಯಾಯಾಧಿಪ ತಿಗಳಿಗೆ ಒಂದುವೇಳೆ ಗೋಚರವಾಗದಿದ್ದರೂ ಸರ್ವಾಂತರ್ಯಾಮಿಯಾದ ಈಶ್ವರನಿಗೆ ಗೋಚರವಾಗದಿರುವುದಿಲ್ಲ. ಆದಕಾರಣ ಇವರು ಈಶ್ವರಾನು ಗ್ರಹಕ್ಕೆ ಎಂದಿಗೂ ಪಾತ್ರರಾಗುವುದಿಲ್ಲ. ಉಚಿತವಾದ ವೃತ್ತಿಗಳನ್ನು ಅವ ಲಂಬಿಸಿ ಅವುಗಳಲ್ಲಿ ತಮ್ಮ ಯೋಗ್ಯತೆಯನ್ನೂ ಚಾತುರ್ಯವನ್ನೂ ತೋರ್ಪ ಡಿಸಿ ಜೀವಿಸುವಂಥವರಿಗೆ ಈಶ್ವರಾನುಗ್ರಹವುಂಟಾಗುವುದಲ್ಲದೆ ಇಹಪರ ಸಾಧನೆಗಳೂ ಆಗುವುವು.



## ಭಿಕ್ಷೆ.

ಧನಮಸ್ತೀತಿ ವಾಣಿಜ್ಯಂ ಕಿಂಚಿದಸ್ತೀತಿ ಕರ್ಷಣಂ |
ಸೇವಾ ನ ಕಿಂಚಿದಸ್ತೀತಿ ಭಿಕ್ಷಾ ನೈವಚ ನೈವಚ ||

ಕೆಲವರು ಭಿಕ್ಷೆಯಿಂದ ಜೀವಿಸುವುದೇ ಒಂದು ಗೌರವಕರವಾದ ವೃತ್ತಿಯೆಂದು ಭಾವಿಸಿರುವರು. ಈ ಭಾವನೆಯು ಶ್ಲಾಘ್ಯವಾದುದಲ್ಲ. ಇಂ ಥವರು ತಮ್ಮ ಬುದ್ಧಿಶಕ್ತಿಗೂ ಕಾಯಶಕ್ತಿಗೂ ಅನುಗುಣವಾದ ಕಾರ್ಯಗ ಳನ್ನು ಮಾಡಿ ಮನುಷ್ಯನಿಗೆ ಸಾಧ್ಯವಾಗಬಹುದಾದ ಸುಖವನ್ನು ಸಂಪಾದಿಸಿ ಕೊಳ್ಳುವುದಕ್ಕೆ ಹಿಂಜರಿದು, ಆಲಸ್ಯದಿಂದ ಕ್ಲೇಶರೂಪವಾದ ಈ ವೃತ್ತಿಯೇ

ಸದ್ವೃತ್ತಿಯೆಂದೂ ಸುಕರವಾದುದೆಂದೂ ಸತ್ಸಂಪ್ರದಾಯಸಿದ್ಧವಾದುದೆಂದೂ ಭಾವಿಸಿ ನಿಶ್ಚಿಂತರಾಗಿರುವರು. ಹೀಗಾಗುವುದಕ್ಕೆ ಇವರಿಗೆ ಶಾಸ್ತ್ರಾರ್ಥ ಸಾರಾಂಶಗಳು ತಿಳಿಯದಿರೋಣವೇ ಕಾರಣವು. ಏತಕ್ಕೆಂದರೆ,—ಭಿಕ್ಷಾವೃತ್ತಿಯು ಮದಮಾತ್ಸರ್ಯಾದಿಗಳನ್ನು ಬಿಟ್ಟು ಸಂಸಾರ ಬಂಧನಕ್ಕೊಳಗಾಗದೆ ಸನ್ಮಾರ್ಗದಲ್ಲಿ ನಡೆಯುತ್ತ ಪರಲೋಕ ಚಿಂತಾಸಕ್ತರಾಗಿ ಐಹಿಕ ಸುಖಾಪೇಕ್ಷೆಗಳನ್ನು ಬಿಟ್ಟು ಸದಾನಂದ ಭರಿತರಾಗಿ ಸದಾ ಭಗವಂತನನ್ನು ಧ್ಯಾನಿಸುತ್ತಲಿರುವ ಜನಗಳಿಗೂ ವಿದ್ಯಾಭ್ಯಾಸ ಮಾಡುತ್ತಲಿರುವ ವಿದ್ಯಾರ್ಥಿಗಳಿಗೂ ವಿಹಿತವಾಗಿರುವುದೇ ಹೊರತು, ಸೋಮಾರಿತನದಿಂದ ಮೈಗಳ್ಳರಾಗಿ ಶರೀರ ಶ್ರಮದಿಂದ ಸಂಪಾದಿಸಿಕೊಂಡು ಸುಖವಾಗಿ ಬಾಳಲಾರದಿರುವವರಿಗೆ ವಿಹಿತವಾದುದಲ್ಲ. ಒಂದುವೇಳೆ ಈ ವೃತ್ತಿಯನ್ನವಲಂಬಿಸಿದವರಿಗೆ ಕಾಯಶಕ್ತಿಯಿರುವಾಗ ಅನ್ನವಸ್ತ್ರಗಳಿಗೆ ಬೇಕಾದಷ್ಟು ದೊರೆತರೂ, ಶರೀರದಲ್ಲಿ ತ್ರಾಣವು ಕಡಿಮೆಯಾದ ಹಾಗೆಲ್ಲಾ ಆ ವೃತ್ತಿಯಿಂದ ಬರುವ ಆಯತಿಯು ಕಡಿಮೆಯಾಗಿ ಕೊನೆಗೆ ಹೀನಸ್ಥಿತಿಯುಂಟಾಗುವುದು. ಆದುದರಿಂದ ಭಿಕ್ಷದಿಂದ ಮಾಡತಕ್ಕ ಜೀವನವು ಐಹಿಕ ವ್ಯಾಪಾರಗಳನ್ನು ಬಿಟ್ಟ ಜನಗಳಿಗೂ ವಿದ್ಯಾಭ್ಯಾಸ ಮಾಡತಕ್ಕ ವಿದ್ಯಾರ್ಥಿಗಳಿಗೂ ವಿನಾ ಉಳಿದವರಿಗೆ ಎಂದಿಗೂ ಯೋಗ್ಯವಾದುದಲ್ಲ.



## ಸ್ಥಾನನಿರ್ಣಯ.

ಯಸ್ಮಿನ್ ಸ್ಥಾನೇ ಯದುಚಿತಂ ತದಾಲೋಚ್ಯಂ ಮನೀಷಿಭಿಃ |
ಯತಃ ಸ್ಥಾನವಿಪರ್ಯಾಸಾತ್ ಅಪಿ ರತ್ನಂ ಶಿಲಾಯತೇ ||

ಯಾವ ವೃತ್ತಿಯ ಆಚರಣೆಗೆ ಯಾವ ಸ್ಥಳವು ಅನುಕೂಲವಾಗಿರುವುದೋ ಅದನ್ನು ಮೊದಲೇ ಗೊತ್ತುಮಾಡಿಕೊಂಡು ಆ ಸ್ಥಳದಲ್ಲಿ ಅದನ್ನು ಆಚರಿಸುತ್ತ ಬರಬೇಕು. ಏಕೆಂದರೆ,—ತಾನು ಮಾಡುವ ಪದಾರ್ಥಗಳಿಗೆ ಎಲ್ಲಿ

ವಿಶೇಷವಾಗಿ ಗಿರಾಕಿಯಿರುವುದಿಲ್ಲವೋ ಅಲ್ಲಿ ಆ ಉದ್ಯೋಗಿಗೆ ಹೆಚ್ಚಾಗಿ ಲಾಭ ಬರುವುದಿಲ್ಲ. ವಿಶೇಷವಾಗಿ ಜನಗಳು ಬಂದು ಇಳಿಯತಕ್ಕ ರೈಲು ಸ್ಟೇಷನ್ನುಗಳಲ್ಲಿಯೂ ಬಹುಜನ ಭರಿತವಾದ ದೊಡ್ಡ ಪಟ್ಟಣಗಳಲ್ಲಿಯೂ ಫಲಾಹಾರದ ಸಾಮಾನುಗಳನ್ನು ಇಟ್ಟುಕೊಂಡಿರತಕ್ಕವರೂ ಅನ್ನ ಹಾಕ ತಕ್ಕ ಹೊಟೇಲಿನ ಯಜಮಾನರೂ ಬಹು ದ್ರವ್ಯವನ್ನು ಸಂಪಾದಿಸುತ್ತಾರೆ. ಅಂಥ ಹೊಟೇಲುಗಳನ್ನು ಗ್ರಾಮಾಂತರಗಳಲ್ಲಿಟ್ಟರೆ ಅಲ್ಲಿ ಅವುಗಳನ್ನು ಇಟ್ಟವನ ಬಂಡವಾಳಕೂಡ ಏಳುವುದಿಲ್ಲ. ಭರತಖಂಡದವನೊಬ್ಬನು ಯೂರೋಪ್ ಖಂಡಕ್ಕೆ ಹೋಗಿ ಗೊಡ್ಡುಸಾರುಮಾಡಿ ಮಾರಿ ಲಕ್ಷಾಂತರ ದ್ರವ್ಯವನ್ನು ಸಂಪಾದಿಸಿದನು. ಅವನು ಅದೇರೀತಿಯಲ್ಲಿ ಈ ದೇಶದಲ್ಲಿ ನಡೆ ಸಿದ್ದರೆ ಅವನಿಗೆ ಒಂದು ಕಾಸೂ ಹುಟ್ಟುತ್ತಿರಲಿಲ್ಲ. ಅರಬ್ಬೀ ದೇಶದವರು ಮೊದಲು ಈ ದೇಶದಿಂದ ಬಗೆಬಗೆಯ ಹಣ್ಣು ಹಂಪಲುಗಳನ್ನೂ ಸಂಬಾ ರದ ಸಾಮಾನುಗಳನ್ನೂ ಯೂರೋಪ್ ಖಂಡಕ್ಕೆ ತೆಗೆದುಕೊಂಡು ಹೋಗಿ ವಿಕ್ರಯಿಸಿ ಕುಬೇರರಾದರು. ಅವರು ಅದೇ ಸಾಮಾನುಗಳನ್ನು ಈ ದೇಶ ದಲ್ಲಿಯೇ ವಿಕ್ರಯಿಸಿದ್ದರೆ ಅಷ್ಟು ಹಣಗಾರರಾಗುತ್ತಿರಲಿಲ್ಲ. ಆದುದರಿಂದ ಯಾವಯಾವ ಉದ್ಯೋಗದಿಂದ ನಿರ್ಮಾಣಮಾಡಲ್ಪಟ್ಟ ಪದಾರ್ಥಗಳಿಗೆ ಎಲ್ಲೆಲ್ಲಿ ವಿಶೇಷವಾಗಿ ಗಿರಾಕಿಯಿರುವುದೋ ಅದನ್ನು ಮೊದಲು ಗೊತ್ತು ಮಾಡಿಕೊಂಡು ಆ ಸ್ಥಳಗಳಿಗೆ ಆ ಪದಾರ್ಥಗಳನ್ನು ಕಳುಹಿಸುವುದು ಲಾಭಕ್ಕೆ ಸಾಧಕವಾದದ್ದು.

ಆಂಗ್ಲೇಯರು ಈ ರೀತಿಯಲ್ಲಿ ನಡೆದುಕೊಳ್ಳುತಿರುವುದರಿಂದಲೇ ಅಧಿಕವಾದ ಉಪಪತ್ತಿಯನ್ನು ಹೊಂದಿ ಸೌಖ್ಯಪಡುತಲಿದ್ದಾರೆ. ಅವರ ದೇಶ ದಲ್ಲಿ ವ್ಯಾಪಾರದಿಂದಲೂ ಬಗೆಬಗೆಯ ವೃತ್ತಿಗಳಿಂದಲೂ ಬಹುಜನರು ಜೀವಿ ಸುತ್ತಲಿದ್ದಾರೆ. ಅವರಲ್ಲಿ ವಿಶೇಷ ಐಶ್ವರ್ಯವಂತರಾದವರು ಕೂಡ ಕೆಲವರಿ ದ್ದಾರೆ. ಕೆಲವುಜನ ವರ್ತಕರು ಲಾಭವನ್ನು ವಾರಗಟ್ಟಲೆ ಎಣಿಸುತ್ತಾರೆ.

ವ್ಯಾಪಾರಕ್ಕಾಗಿ ಕೆಲವುಜನರು ಸೇರಿಕೊಂಡು ಒಂದೊಂದು ಕಂಪೆನಿಯನ್ನು ಮಾಡಿಕೊಂಡು ಲಾಭವನ್ನು ಪಡೆಯುತ್ತಲಿದ್ದಾರೆ. ಇಂಥ ಕಂಪೆನಿಗಳಲ್ಲಿ ಒಂದೊಂದು ಕಂಪೆನಿಯವರಿಗೆ ವಾರಕ್ಕೆ ಅನೇಕಲಕ್ಷ ರೂಪಾಯಿಗಳ ವರಮಾನವು ಸಾಧಾರಣವಾಗಿ ಬರುವುದು. ಮತ್ತೆ ಕೆಲವರು ವರಮಾನವನ್ನು ದಿನಗಟ್ಟಲೆ ಎಣಿಸುವುದನ್ನು ಕೂಡ ಬಿಟ್ಟು ಒಂದು ನಿಮಿಷಕ್ಕೆಷ್ಟೆಂಬುದಾಗಿ ಗೊತ್ತುಮಾಡುತ್ತಾರೆ. ಒಂದು ನಿಮಿಷಕ್ಕೆ ಒಂದುಸಾವಿರ ರೂಪಾಯಿನಮೇಲೆ ವರಮಾನವುಳ್ಳವರು ನಾಲ್ಕೈದು ಜನರು ಲಂಡನ್ನಿನಲ್ಲಿರುತ್ತಾರೆ. ಇಂಥ ಅನ್ಯಾದೃಶವಾದ ಸಂಪತ್ತುಗಳುಂಟಾಗುವುದಕ್ಕೆ ಅವರು ಗಿರಾಕಿಯಿರುವ ಸ್ಥಳಗಳನ್ನು ನೋಡಿಕೊಂಡು ವ್ಯಾಪಾರಮಾಡಿದ್ದೇ ಮುಖ್ಯಕಾರಣವು. ಆದುದರಿಂದ ಉದ್ಯೋಗವನ್ನು ಅವಲಂಬಿಸಿದವರು ಸರಿಯಾದ ಗಿರಾಕಿಯಿರುವ ಸ್ಥಳಗಳನ್ನು ನೋಡಿಕೊಂಡು ತಮ್ಮ ಉದ್ಯೋಗವನ್ನು ಪ್ರಾರಂಭಿಸಿದಲ್ಲಿ ವೃದ್ಧಿಗೆ ಬರುವುದಕ್ಕೆ ಅವಕಾಶವಾಗುವುದು.



## ಆಯುವ್ಯಯ ವಿಮರ್ಶೆ (ಬಡ್ಜೆಟ್.)

ಕ್ಷಿಪ್ರಮಾಯಮನಾಲೋಚ್ಯ ವ್ಯಯಮಾನಶ್ಚ ಸ್ವವಾಞ್ಛಯಾ |
ಪರಿಕ್ಷೀಯತಏವಾಸೌ ಧನೀ ವೈಶ್ರವಣೋಪಮಃ ||

ಸರ್ಕಾರದವರೂ, ಭಾರೀಜಮೀನ್ದಾರರೂ, ರೈಲು ಮೊದಲಾದ ಕಂಪೆನಿಯ ವರ್ತಕರೂ ವರ್ಷಕ್ಕೆ ಒಂದುಸಲ ತಮಗೆ ಬರತಕ್ಕ ಆಯತಿಯನ್ನು ಬಾಬುವಾರು ವಿಂಗಡಿಸಿಕೊಂಡು ಅದಕ್ಕನುಸಾರವಾಗಿ ಆ ವರುಷದಲ್ಲಿ ಆಗಬೇಕಾದ ವೆಚ್ಚವನ್ನೂ ಅಂದಾಜಿನಿಂದ ಏರ್ಪಡಿಸಿಕೊಂಡು ಕೂಡಿದಮಟ್ಟಿಗೂ ಅಂದಾಜಿಗನುಸಾರವಾಗಿ ವೆಚ್ಚಮಾಡುತ್ತ ಬರುವರು. ಬಡ್ಜೆಟ್ಟನಲ್ಲಿಲ್ಲದಿರತಕ್ಕ ವೆಚ್ಚಗಳೇನಾದರೂ ಆಕಸ್ಮಿಕವಾಗಿ ಸಂಭವಿಸಿದಲ್ಲಿ

ಅವಕ್ಕೆ ತಕ್ಕ ಆದಾಯವಿದ್ದಹೊರತು ಅಂಥ ವೆಚ್ಚಗಳನ್ನು ಮಾಡುವು ದಿಲ್ಲ. ಅಂಥ ಬಾಬುಗಳು ಆವಶ್ಯಕವೆಂದು ತೋರಿದರೆ ಮುಂದಿನ ವರುಷದ ಬಜೆಟ್ಟನ್ನು ವಿಮರ್ಶೆ ಮಾಡತಕ್ಕ ಕಾಲದಲ್ಲಿ ಅದನ್ನು ಪರ್ಯಾಲೋಚಿಸಿ ಬಜೆಟ್ಟನಲ್ಲಿ ಸೇರಿಸಿ ಆ ವರುಷದಲ್ಲಿ ಆ ಖರ್ಚನ್ನು ಮಾಡುವರು. ರಾಜ್ಯಕ್ಕೆ ಸರ್ಕಾರದವರೂ, ಭಾರೀ ಜಮೀನ್ದಾರಿಗೆ ಜಮೀನ್ದಾರರೂ, ಕಂಪೆನಿಗಳಿಗೆ ಕಂಪೆನಿಯ ವರ್ತಕರೂ ಜವಾಬುದಾರರಾಗಿರುವಂತೆ, ಪ್ರತಿ ಕುಟುಂಬಕ್ಕೂ ಆ ಕುಟುಂಬಾಧಿಪತಿಯು ಜವಾಬುದಾರನಾಗಿರುವನು.

ಆದುದರಿಂದ ಪ್ರತಿಕುಟುಂಬದ ಯಜಮಾನನೂ ವರುಷಕ್ಕೊಂದು ಸಲ ಆ ಕುಟುಂಬದಲ್ಲಿ ನಿಯುತವಾದ ಆಯ ವ್ಯಯಗಳ ಅಂದಾಜುಗಳನ್ನು ಯೋಚಿಸಿ ಬಜೆಟ್ಟನ್ನು ಏರ್ಪಡಿಸಿಕೊಳ್ಳಬೇಕು. ಹೀಗೆ ಏರ್ಪಡಿಸುವಾಗ ವೆಚ್ಚದಬಾಬಿನಲ್ಲಿ ಸರ್ಕಾರಕ್ಕೆ ಕೊಡತಕ್ಕ ಕಂದಾಯ, ಕುಟುಂಬಕ್ಕೆ ಆಗ ಬೇಕಾದ ಅನ್ನ ವಸ್ತ್ರ, ಮಕ್ಕಳ ವಿದ್ಯಾಭ್ಯಾಸ, ಹವ್ಯಕವ್ಯಾದಿಗಳು, ಧರ್ಮ ಇವುಗಳಿಗೆ ಆಗುವಷ್ಟು ನೋಡಿಕೊಳ್ಳಬೇಕು. ಇದಲ್ಲದೆ ಅಕಸ್ಮಾತ್ತಾಗಿ ಸಂಭವಿಸುವ ತೊಂದರೆಯ ನಿವಾರಣಾರ್ಥವಾಗಿ ಒಂದು ಫಂಡನ್ನು ಶೇಖರಿಸಿ ಡುವುದಕ್ಕೂ ಉಳಿಯುವಂತೆ ಪೂರ್ವಾಪರಯೋಚನೆಯಿಂದ ಕುಟುಂಬದ ಆಯುತಿಯನ್ನು ವಿನಿಯೋಗಿಸಬೇಕು.

ಈಪ್ರಕಾರವಾಗತಕ್ಕ ಆಯುವ್ಯಯಗಳಿಗೆಲ್ಲಾ ಜಮಾ ಖರ್ಚು ಲೆಕ್ಕಗಳನ್ನಿಟ್ಟು ಬಜೆಟ್ಟಿನ ಅಂದಾಜು ಮೀರದಂತೆ ನಡೆಸುತ್ತ ಬರಬೇಕು. ಹೀಗೆ ನಡೆಯುವ ಕುಟುಂಬಾಧಿಪತಿಯು ಮಿತವಾಗಿ ಜೀವಿಸುತ್ತ ಉತ್ತರತ್ರ ಕುಟುಂಬದಲ್ಲಿ ಆಗಬೇಕಾದ ಶುಭಾಶುಭ ಕಾರ್ಯಗಳಿಗೋಸ್ಕರವೂ ಅಕಸ್ಮಾತ್ತಾಗಿ ಸಂಭವಿಸತಕ್ಕ ತೊಂದರೆಗಳ ನಿವಾರಣೆಗೋಸ್ಕರವೂ ತಾನು ಆರ್ಜಿಸಿದ್ದರಲ್ಲಿ ಒಂದು ಭಾಗವನ್ನು ತೆಗೆದಿಡಬೇಕು. ಈ ಪ್ರಕಾರ ತೆಗೆದಿಟ್ಟ ಧನವು ಯಾವುದಕ್ಕೂ ವಿನಿಯೋಗವಾಗದಿದ್ದರೆ ಕಾಲಕ್ರಮೇಣ

ದೇಹದಾರ್ಢ್ಯವು ಕಡಿಮೆಯಾದಾಗ ಅದು ಒಂದು ಅವಲಂಬನವಾಗಿ ಪರಿಣ ಮಿಸಿ ಅಪರ ವಯಸ್ಸಿನಲ್ಲಿ ಜೀವನಾರ್ಥವಾದ ಪರೋಪಸರ್ಪಣೆಯನ್ನು ತಪ್ಪಿಸಿ ಸ್ವತಂತ್ರವಾಗಿ ಜೀವಿಸುವಂತೆ ಮಾಡುವುದು. ಹೀಗೆ ನಡೆಯದೆ ಆಗ ಸಂಪಾದಿಸಿದುದನ್ನು ಆಗಲೇ ವೆಚ್ಚಮಾಡುತ್ತಲಿರುವವನು ಗೃಹಕೃತ್ಯ ದಲ್ಲಿ ತೊಂದರೆಯುಂಟಾದಾಗ ಯಾಚಕತನಕ್ಕೆ ಹೋಗುವನು. ಆ ಯಾಚ ಕತನದಲ್ಲಿಯೂ ದುಡ್ಡು ಹುಟ್ಟದಿದ್ದರೆ ಸಾಲಮಾಡಿಕೊಂಡು ಆಗಿನ ಕಾರ್ಯ ಗಳನ್ನು ನಿರ್ವಹಿಸಿ, ಕೊನೆಕೊನೆಗೆ ತಾನು ಮಾಡಿದ ಸಾಲಗಳನ್ನು ತೀರಿಸು ವುದಕ್ಕೆ ಮಾರ್ಗವಿಲ್ಲದೆ ಪರಿಣಾಮದಲ್ಲಿ ಅನಿರ್ವಚನೀಯವಾದ ಸಂಕಟಗ ಳನ್ನು ಅನುಭವಿಸಿ ತಾನು ಕೆಟ್ಟದ್ದಲ್ಲದೆ ತನ್ನ ಕುಟುಂಬದವರನ್ನೂ ಕೆಡಿ ಸುವನು.

ಇದನ್ನು ನೋಡಿದರೆ ಆದಾಯವೆಚ್ಚದ ಅಂದಾಜನ್ನಿಟ್ಟುಕೊಳ್ಳದೆ ನಡೆ ಯುವವರು ಎಷ್ಟು ಉನ್ನತಸ್ಥಿತಿಯಲ್ಲಿರುತ್ತಾರೆಯೋ ಅಷ್ಟು ಹೀನಸ್ಥಿತಿಗೂ ಜಾಗ್ರತೆಯಲ್ಲಿಯೇ ಬರುತ್ತಾರೆಂಬ ಅಂಶವು ಗೊತ್ತಾಗುವುದು. ಮತ್ತು ಅಂಥವರಿಗೆ ಕೆಲವು ದಿವಸಗಳಲ್ಲಿಯೇ ಸಾಲವು ಕೂಡ ಹುಟ್ಟದೆ ಹೋಗು ವುದು. ಇಂಥವರ ಭಾಗಕ್ಕೆ ಕುಬೇರನ ನವನಿಧಿಗಳೂ ಗಾಳೀಗಂಟೆನಂತೆ ಪರಿಣಮಿಸುವುವು. ಈ ಜನರು ಕುಟುಂಬದ ಸಂಪತ್ತುಗಳನ್ನು ಜಾಗ್ರತೆ ಯಾಗಿ ಕಳೆದುಕೊಂಡು, ಸಾಲಗಾರರ ಬಾಧೆಗೆ ಒಳಗಾಗಿ, ಅರ್ಥಹಾನಿ ಮಾನಹಾನಿಗಳನ್ನು ಹೊಂದಿ ಕೇವಲ ಹೀನಸ್ಥಿತಿಗೆ ಬಂದು, ತಮ್ಮ ಅವಿವೇಕ ವನ್ನು ಸ್ಮರಿಸಿಕೊಳ್ಳುತ್ತಾ, ತಮ್ಮನ್ನು ತಾವೇ ನಿಂದಿಸಿಕೊಳ್ಳುತ್ತಾ, ಭಗ್ನ ಮನೋರಥರಾಗಿ, ಅಪಾರವಾದ ದುಃಖದಲ್ಲಿ ಮುಳುಗಿ, ಹೀಗೆ ಬದುಕು ವುದಕ್ಕಿಂತಲೂ ಪ್ರಾಣತ್ಯಾಗಮಾಡಿಕೊಳ್ಳುವುದು ಲೇಸೆಂದು ಯೋಚಿಸು ವರು. ಇವರು "ಮಾಡಿದ್ದುಣ್ಣೋ ಮಹರಾಯ" ಎಂಬಂತೆ ತಾವು ಮಾಡಿದ ಕರ್ಮದ ಫಲವನ್ನು ಅನುಭವಿಸುವರು. ಕೊನೆಕೊನೆಗೆ "ಪಾಪಿಷ್ಠನಾದವನು

ಪ್ರಾಯಶಃ ಬಹುಕಾಲ ಬದುಕುವನು " ಎಂಬುದಕ್ಕೆ ಸರಿಯಾಗಿ ನಮಗೆ ಮರಣವು ಕೂಡ ಜಾಗ್ರತೆಯಲ್ಲಿ ಬರುವುದಿಲ್ಲವೆಂದು ಪರಿತಪಿಸುತ್ತ ಹೀಗೆ ಪಾಪಾನುಭವರೂಪಗಳಾದ ಕಷ್ಟಗಳನ್ನನುಭವಿಸಿ ಕಡೆಗೆ ಕಾಲಾಧೀನರಾಗುವರು.

ಇವರೇ ಹೀಗಿರುವಾಗ ಇವರನ್ನು ನಂಬಿದ ಪತ್ನೀ ಪುತ್ರಾದಿಗಳ ಅವಸ್ಥೆಯನ್ನು ಹೇಳಲಳವೇಯಿಲ್ಲ. ಆದುದರಿಂದ ಕುಟುಂಬಾಧಿಪತಿಗಳು ಈ ವಿಷಯಗಳನ್ನೆಲ್ಲಾ ಪರ್ಯಾಲೋಚಿಸಿ, ಗೃಹಕೃತ್ಯಗಳ ಆದಾಯವೆಚ್ಚಗಳಲ್ಲಿ ಪೂರ್ವಾಪರಜ್ಞತೆಯಿಂದ ಬಡ್ಜೆಟ್ಟನ್ನೇರ್ಪಡಿಸಿಕೊಂಡು ಗೃಹಕೃತ್ಯ ಮಾಡದಿರುವವರು ಯಾವ ರೀತಿಯಲ್ಲಿ ಕಷ್ಟಕ್ಕೆ ಗುರಿಯಾಗುತ್ತಾರೆಯೋ ಅದನ್ನು ಪರ್ಯಾಲೋಚಿಸಿ, ಕುಟುಂಬದಲ್ಲಿ ಆಗಾಗ್ಗೆ ನಡೆಯಬೇಕಾದ ಕಾರ್ಯಗಳಗೂ ಉತ್ತರತ್ರ ಸನ್ನಿಹಿತವಾಗತಕ್ಕ ಶುಭಾಶುಭಕಾರ್ಯಗಳಗೂ ಅಕಸ್ಮಾತ್ತಾಗಿ ಸಂಭವಿಸತಕ್ಕ ತೊಂದರೆಗಳ ನಿವಾರಣೆಗೂ ತಕ್ಕಂತೆ ಕುಟುಂಬದ ಆದಾಯವನ್ನು ವೆಚ್ಚಮಾಡುತಿದ್ದರೆ ಇಹಪರಸೌಖ್ಯಗಳನ್ನು ಹೊಂದುವರು.

---

## ಗೃಹಕೃತ್ಯಗಳು.

ಅತಿವ್ಯಯೋನವೇಕ್ಷಾ ಚ ತಥಾರ್ಜನಮಧರ್ಮತಃ |
ಮೋಕ್ಷಣಂ ದೂರಸಂಸ್ಥಾನಂ ಕೋಶವ್ಯಸನಮುಚ್ಯತೇ ||

ಕುಟುಂಬದವರು ಗೃಹಕೃತ್ಯಗಳಲ್ಲಿ ದೇಹವನ್ನು ದಂಡಿಸಿ ಶ್ರದ್ಧೆಯಿಂದಲೂ ಆಸಕ್ತಿಯಿಂದಲೂ ಕೆಲಸಗಳನ್ನು ಮಾಡುತ್ತಿದ್ದರೆ ಗೃಹಕೃತ್ಯದಲ್ಲಿ ಆದಾಯವಾಗುವುದಲ್ಲದೆ ಅವರಿಗೂ ಕೆಲಸದಲ್ಲಿ ರೂಢಿಯೂ ತಿಳವಳಿಕೆಯೂ ಉಂಟಾಗುವುವು. ಕೆಲಸಮಾಡುವುದು ಅಗೌರವವೆಂದು ಭಾವಿಸಿ

ರತಕ್ಕ ಸ್ತ್ರೀಪುರುಷರಿಗೆ ತಮ್ಮ ಕೆಲಸದಲ್ಲಿ ಆಸಕ್ತಿ ತಪ್ಪಿ ಅವರು ತಮ್ಮ ಕೆಲಸಗಳನ್ನು ಫಲದಾಯಕವಾಗದಂತೆ ಮಾಡಿಕೊಳ್ಳುವರು. ಇಂಥವರಿಗೆ ಕಾರ್ಯರೂಪವಾದ ವ್ಯಾಯಾಮದಿಂದುಂಟಾಗತಕ್ಕ ರೂಢಿಯೂ ತಿಳವಳಿಕೆಯೂ ನಿರ್ವಾಹಶಕ್ತಿಯೂ ತಪ್ಪಿ ಸೋಮಾರಿತನವು ವಿಶೇಷವಾಗಿ ನೆಲೆಗೊಳ್ಳುವುದು. ಯಾರು ಶ್ರದ್ಧೆಯಿಂದ ಕೆಲಸಗಳನ್ನು ಮಾಡುವರೋ ಅವರಿಗೆ ಪ್ರಯೋಜನವು ಹಸ್ತಗತವಾಗುವುದು. ಕೆಲಸಮಾಡುವವರಿಗೆ ಕಾಲಹರಣಕ್ಕೂ ಸೋಮಾರಿತನಕ್ಕೂ ಅವಕಾಶವಿರುವುದಿಲ್ಲ. ಇವರಿಗೆ ಆಟಪಾಟಗಳೂ ಕೂಡ ಬೇಕಾಗುವುದಿಲ್ಲ. ಹಿಡಿದ ಕೆಲಸವು ಪೂರೈಸುವವರೆಗೂ ಆಲಸ್ಯಪಡದೆ ಕೆಲಸಮಾಡತಕ್ಕವರು ಒಳ್ಳೇ ಶೀಲಸ್ವಭಾವವುಳ್ಳವರಾಗಿಯೂ ಸನ್ಮಾರ್ಗಪ್ರವರ್ತಕರಾಗಿಯೂ ಆಗುವರು. ಅಶ್ರದ್ಧೆಯಿಂದ ಕೆಲಸಮಾಡತಕ್ಕವರಿಗೆ ಹಿಡಿದ ಕೆಲಸವು ಸರಿಯಾಗಿ ಕೈಗೂಡುವುದಿಲ್ಲ. ಅವರಿಗೆ ಸೋಮಾರಿತನವೂ ಸಿಡುಕೂ ದುರಾಲಾಪಗಳೂ ದುರಾಲೋಚನೆಗಳೂ ಉಂಟಾಗಿ ದುರ್ಮಾರ್ಗಕ್ಕೆ ಅವಕಾಶವುಂಟಾಗುವುದು. ಇಂಥವರು ಆಸಕ್ತಿಯನ್ನೂ ಆರೋಗ್ಯಸಂಪತ್ತುಗಳನ್ನೂ ಕ್ರಮಕ್ರಮವಾಗಿ ಕಳೆದುಕೊಳ್ಳುವರು. ಇವರು ಕುಟುಂಬಗಳಲ್ಲಿ ಬಹು ದ್ರವ್ಯವನ್ನು ವ್ಯಯಮಾಡಿದರೂ ಅದಕ್ಕೆ ತಕ್ಕ ಸುಖವು ಇವರಿಗಿರುವುದಿಲ್ಲ. ಇವರ ಮನೆಯ ಸ್ವಂತ ಜನರಿಗಿಂತಲೂ ಅಲ್ಲಿನ ಬಾಣಸಿಗರು ಆ ಮನೆಯ ಸೌಖ್ಯವನ್ನನುಭವಿಸುವರು. ಅವರು ಭುಂಜಿಸಿದ ಅನ್ನವು ಜೀರ್ಣಕ್ಕೆ ಬರುವುದು. ಮನೆಯಲ್ಲಿ ಮಾಡತಕ್ಕ ಬಗೆಬಗೆಯ ತಿಂಡಿಗಳೆಲ್ಲಾ ಅವರಿಗೆ ವಿಶೇಷವಾಗಿ ರುಚಿಸುವುವು. ಶರೀರದಾರ್ಢ್ಯದಲ್ಲಿಯೂ ಚಿತ್ತಸ್ವಾಸ್ಥ್ಯದಲ್ಲಿಯೂ ಅವರು ಆ ಮನೆಯವರಿಗಿಂತಲೂ ಉತ್ತಮವಾದ ಸ್ಥಿತಿಯಲ್ಲಿರುವರು. ಅಂಥ ಮನೆಯ ಸ್ತ್ರೀಪುರುಷರೆಲ್ಲರೂ ತಮ್ಮ ಮನೆಯ ಬಾಣಸಿಗರಿಗಿಂತಲೂ ಹೆಚ್ಚಾಗಿ ಸೌಖ್ಯಾನುಭವವುಳ್ಳವರೆಂದು ಹೇಳುವುದಕ್ಕಾಗುವುದಿಲ್ಲ. ವಿವೇಕವಿಲ್ಲದ

ದೊಡ್ಡ ಸ್ಥಿತಿಯಲ್ಲಿರತಕ್ಕ ಸ್ತ್ರೀಪುರುಷರಿಗೆ ಈ ಅವಸ್ಥೆಯೇ ಒಂದು ಶಿಕ್ಷೆ ಯೆಂಬುದಾಗಿ ಭಾವಿಸಬಹುದು. ಇಂಥ ದೊಡ್ಡ ಮನುಷ್ಯರ ಮನೆಯಲ್ಲಿ ತಲೆಯೊಂದಕ್ಕೆ ಹತ್ತು ರೂಪಾಯಿ ಮೊದಲುಗೊಂಡು ನೂರುರೂಪಾಯಿಗಳ ವರೆಗೂ ಪ್ರತಿತಿಂಗಳಲ್ಲಿಯೂ ವೆಚ್ಚವಾಗುವುದು. ಆದರೂ ಆ ಜನರಿಗೆ ತಿಂಗಳಿಗೆ ಎಂಟುಹತ್ತು ರೂಪಾಯಿಗಳಲ್ಲಿ ಜೀವನಮಾಡತಕ್ಕ ಪೂರ್ವಾಪರ ಜ್ಞರಾದ ಬಡಜನರಿಗೆ ಇರತಕ್ಕ ಸೌಖ್ಯವೂ ನೈಶ್ಚಿಂತ್ಯವೂ ಇರುವುದಿಲ್ಲ.

ಒಬ್ಬ ಒಕ್ಕಲಿಗನು ಬೆಳಗಿನಿಂದ ಹಿಡಿದು ಮಧ್ಯಾಹ್ನದವರೆಗೆ ವಿನೋದವಾಗಿ ಮಾತುಗಳನ್ನಾಡುತ್ತಾ ಬಾಯಿಗೆ ಬಂದ ಪದ್ಯಗಳನ್ನು ಹೇಳಿಕೊಳ್ಳುತ್ತಾ ಹೊಲ ಗದ್ದೆ ಮೊದಲಾದುವುಗಳಲ್ಲಿ ತನ್ನ ಕುಟುಂಬದವರೊಡನೆ ಶ್ರದ್ಧೆಯಿಂದ ಕೆಲಸಮಾಡುವನು. ಮಧ್ಯಾಹ್ನಕ್ಕೆ ಅವನ ಕುಟುಂಬದ ಸ್ತ್ರೀಪುರುಷರಲ್ಲಿ ಯಾರಾದರೊಬ್ಬರು ಹಿಟ್ಟನಮುದ್ದೆಗಳನ್ನೂ ಸಾಮಾನ್ಯ ವಾದ ವ್ಯಂಜನದ್ರವ್ಯಗಳಲ್ಲಿ ಯಾವುದಾದರೊಂದನ್ನೂ ತೆಗೆದುಕೊಂಡು ಬಂದು ಕೆಲಸಮಾಡಿದವರಿಗೆ ಬಡಿಸುವರು. ಅವರು ಅವುಗಳನ್ನು ಅತ್ಯಂತ ಅಭಿರುಚಿಯಿಂದ ಭುಂಜಿಸಿ ಗಿಡದ ನೆಳಲಿನಲ್ಲಿ ಕುಳಿತುಕೊಂಡು ಗೋಟಡಕೆ ತರಗೆಲೆಗಳನ್ನು ಹಾಕಿಕೊಂಡು ಕೊನೆಗೆ ಒಂದು ಮರದ ಬುಡವನ್ನಾದರೂ ತಲೆಗಿಂಬಾಗಿ ಮಾಡಿಕೊಂಡು ಗಾಢನಿದ್ರೆಯನ್ನು ಮಾಡಿ ವಿಶ್ರಮಿಸಿಕೊಂಡೆದ್ದು ಮತ್ತೆ ಮಾಡಬೇಕಾದ ಕಾರ್ಯಗಳನ್ನು ಪೂರಯಿಸಿ ತಮ್ಮ ಗುಡಿಸಲುಗಳಿಗಾಗಲಿ ಹುಲ್ಲಿನಮನೆಗಳಿಗಾಗಲಿ ಹೋಗಿ ಪುತ್ರ ಮಿತ್ರ ಕಳತ್ರಾದಿಗಳೊಡನೆ ಸೇರಿ ಆಗ ಮಾಡಿದ ಆಹಾರವನ್ನು ಭುಂಜಿಸಿ ಕಾರ್ಯಸಾಧನೆಯ ಆಸಕ್ತಿಯಿಂದ ಕಾಲಹರಣಮಾಡುವರು ಇಂಥ ನಡೆವಳಿಕೆಯುಳ್ಳ ಮನೆಯವರಲ್ಲಿ ಸೋಮಾರಿತನವು ತಪ್ಪಿ ಕೆಲಸಗಳಲ್ಲಿ ಶ್ರದ್ಧೆಯುಂಟಾಗಿ ಸಕಲ ಸಂಪತ್ತುಗಳೂ ಕ್ರಮಕ್ರಮವಾಗಿ ವೃದ್ಧಿಯನ್ನೈದುವುವು. ದೊಡ್ಡ ಮನುಷ್ಯರೂ ಅವರ ಮನೆಯವರೂ "ನಾವು ಪಂಚಭಕ್ಷ್ಯ ಪರಮಾನ್ನ

ಗಳನ್ನು ಭುಂಜಿಸಿ ವಿಟ ನಟ ಗಾಯಕ ಮೊದಲಾದವರು ಮಾಡತಕ್ಕ ವಿನೋದಕಾರ್ಯಗಳಿಂದ ಕಾಲಹರಣ ಮಾಡುತ್ತ ಹಂಸತೂಲಿಕಾತಲ್ಪಗಳ ಮೇಲೆ ಸುಖಶಯನಗೈದು ಉಪಚಾರಗಳನ್ನು ಹೊಂದುತ್ತಲಿದ್ದರೂ ನಮಗೆ ಚೆನ್ನಾಗಿ ನಿದ್ದೆ ಬರುವುದಿಲ್ಲ. ಆ ಜನರಿಗೆ ಇರುವಂತೆ ಸೌಖ್ಯವು ನಮಗೆ ಲೇಶವೂ ಇಲ್ಲ," ಎಂಬುದಾಗಿ ಪರಿತಪಿಸುತ್ತಲಿರುವರು. ಇದಲ್ಲದೆ ಇವರಿಗೆ ಕಾರ್ಯದಲ್ಲಿ ಶ್ರದ್ಧೆ ತಪ್ಪಿ ದಿನದಿನಕ್ಕೆ ಜಡತ್ವವು ವಿಶೇಷವಾಗಿ ನೆಲೆಗೊಳ್ಳುವುದು. ಇವರಿಗುಂಟಾದ ಜಡತ್ವದಿಂದ ದಿನ ದಿನಕ್ಕೆ ದೌರ್ಬಲ್ಯವೂ ರೋಗವೂ ದರಿದ್ರತನವೂ ನೆಲೆಗೊಳ್ಳುವುವು. ಆದುದರಿಂದ ಗೃಹಕೃತ್ಯದಲ್ಲಿ ಸರ್ವರ ಸೌಖ್ಯಕ್ಕೂ ಅಭಿವೃದ್ಧಿಗೂ ಅಪೋಹವಿಲ್ಲದಂತೆ ಕುಟುಂಬಭರಣವನ್ನು ಮಾಡಬೇಕಾದರೆ ಕುಟುಂಬದಲ್ಲಿನ ಸರ್ವರೂ ಅಲಸರಾಗದೆ ಶ್ರದ್ಧೆಯಿಂದ ಕೆಲಸಗಳನ್ನು ಮಾಡುತಿರಬೇಕು.

## ಭೃತ್ಯ.

ಯಸ್ಮಿನ್ ಕೃತ್ಯಂ ಸಮಾವೇಶ್ಯ ನಿರ್ವಿಶಂಕೇನ ಚೇತಸಾ |
ಆಸ್ಯತೇ ಸೇವಕಃ ಸ ಸ್ಯಾತ್ ಕಳತ್ರಮಿವ ಚಾಪರೇ ||
ಯೋ ಹ ಭೃತ್ಯೋ ನಿಯುಕ್ತಸ್ಸನ್ ಭರ್ತ್ರಾ ಕರ್ಮಣಿ ದುಷ್ಕರೇ |
ಕುರ್ಯಾತ್ತದನುರಾಗೇಣ ತಮಾಹುಃ ಪುರುಷೋತ್ತಮಂ ||
ನಿಯುಕ್ತೋ ಯಃ ಪರಂ ಕಾರ್ಯಂ ನ ಕುರ್ಯಾನ್ನೃಪತೇಃ ಪ್ರಿಯಂ |
ಭೃತ್ಯೋ ಯುಕ್ತಸ್ಸಮರ್ಥಶ್ಚ ತಮಾಹುರ್ಮಧ್ಯಮಂ ನರಂ ||
ನಿಯುಕ್ತೋ ನೃಪತೇಃ ಕಾರ್ಯಂ ನ ಕುರ್ಯಾದ್ಯಸ್ಸಮಾಹಿತಃ |
ಭೃತ್ಯೋ ಯುಕ್ತಸ್ಸಮರ್ಥಶ್ಚ ತಮಾಹುಃ ಪುರುಷಾಧಮಂ ||

ಮನುಷ್ಯರು ತಾವು ಅವಲಂಬಿಸಿದ ವೃತ್ತಿಗೆ ಸಂಬಂಧಪಟ್ಟ ಇತರ







ಕೆಲಸಗಳನ್ನು ನೆರವೇರಿಸುವುದಕ್ಕಾಗಿ ಭೃತ್ಯರನ್ನು ಇಟ್ಟುಕೊಳ್ಳಬೇಕಾಗಿ ಬರುವುದು. ಚಾಕರರನ್ನು ಇಟ್ಟುಕೊಳ್ಳುವುದರಲ್ಲಿ ಅವರ ಶೀಲಸ್ವಭಾವ ಗಳನ್ನು ಪರಿಶೀಲಿಸಮಾಡುವುದು ಅತ್ಯಾವಶ್ಯಕವು. ಚಾಕರರಲ್ಲಿ ಒಳ್ಳೇ ಶೀಲಸ್ವಭಾವವುಳ್ಳವರಾಗಿಯೂ, ತ್ರಿಕರಣಶುದ್ಧರಾಗಿಯೂ, ಕುಡುಕತನ ಮೊದಲಾದ ದುರ್ಗುಣಗಳಿಲ್ಲದವರಾಗಿಯೂ, ಶ್ರದ್ಧೆಯಿಂದ ಕಾರ್ಯನಿರ್ವಾಹ ಮಾಡತಕ್ಕವರಾಗಿಯೂ, ದೇಹದಾರ್ಢ್ಯವುಳ್ಳವರಾಗಿಯೂ, ಸಂಸಾರಿಗಳಾ ಗಿಯೂ, ತಿಳವಳಿಕೆಯುಳ್ಳವರಾಗಿಯೂ ಇರತಕ್ಕವರನ್ನು ಸಂಪಾದಿಸುವುದು ಆವಶ್ಯಕವು. ಈ ಗುಣಗಳಲ್ಲಿ ಯಾವುದಿಲ್ಲದಿದ್ದರೂ ಅವರಿಂದ ಪ್ರಯೋಜನ ವುಂಟಾಗುವುದಿಲ್ಲ. ಭೃತ್ಯರಲ್ಲಿ ಅವಿವೇಕಿಗಳಾದವರು ಮಾಡುವ ಕೆಲಸ ಗಳು ವಸ್ತುತಃ ಆಗತಕ್ಕವುಗಳಾಗಿದ್ದರೂ ಅವರ ಅವಿವೇಕದಿಂದ ಅವು ಆಗದೆ ಹೋಗುವುವು. ಅವಿವೇಕಿಗಳಾದ ಚಾಕರರಿಗೆ ಕಾರ್ಯಾಕಾರ್ಯಸ್ವರೂ ಪವೇ ತೋರುವುದಿಲ್ಲ. ತಿಳವಳಿಕೆಯಿಂದ ಪೂರ್ವಾಪರ ವಿರೋಧಗಳಿಲ್ಲದೆ ಕೆಲಸ ಮಾಡುವ ಭೃತ್ಯನಿಗೆ ಎಲ್ಲಾ ಕೆಲಸಗಳೂ ಸಾಧ್ಯವಾಗುವುವು. ಕೆಲ ಸವು ಅಲ್ಪವಾಗಿದ್ದರೂ ಅದಕ್ಕೆ ಉಪಕರಣಗಳು ಅನೇಕವಾಗಿರುವುವು. ಅನೇ ಕ ಉಪಾಯಗಳಿಂದ ಸಾಧಿಸುವ ಕೆಲಸವು ನಿಸ್ಸಂದೇಹವಾಗಿ ಸಿದ್ಧಿಸುವುದು. ಯಜಮಾನನು ಹೇಳಿದ ಕೆಲಸವು ಎಷ್ಟೇ ಅಸಾಧ್ಯವಾಗಿದ್ದರೂ ಅದನ್ನು ಮಾಡಿ ಯಜಮಾನನ ಪ್ರೀತಿಗೆ ಪಾತ್ರನಾಗುವವನು ಉತ್ತಮನಾದ ಭೃತ್ಯನು. ಸಮರ್ಥನಾಗಿದ್ದುಕೊಂಡು ಯಜಮಾನನು ಹೇಳಿದ ಕೆಲಸವನ್ನು ಮಾತ್ರ ಉತ್ಸಾಹದಿಂದ ಮಾಡಿ ಅದಕ್ಕೆ ಸಂಬಂಧಪಟ್ಟ ಇತರ ಕೆಲಸಗಳನ್ನು ಮಾಡ ದಿರತಕ್ಕವನು ಮಧ್ಯಮನಾದ ಭೃತ್ಯನು. ಸಮರ್ಥನಾಗಿದ್ದರೂ ಯಜ ಮಾನನು ಹೇಳಿದ ಕೆಲಸವನ್ನು ಚೆನ್ನಾಗಿ ಮಾಡದಿರುವವನು ಅಧಮನಾದ ಭೃತ್ಯನು. ಹೀಗೆ ಚಾಕರರು ಮೂರು ಪ್ರಕಾರವಾಗಿದ್ದಾರೆ. ಇವರಲ್ಲಿ ಉತ್ತ ಮತರಗತಿಯವನಿಂದ ಆಗುವಷ್ಟು ಪ್ರಯೋಜನವು ಮಧ್ಯಮ ತರಗತಿ

ಯುವನಿಂದ ಆಗದಿದ್ದರೂ, ಅವನಿಂದ ಯಥೋಚಿತವಾದ ಪ್ರಯೋಜನ ವಾದರೂ ಉಂಟಾಗುವುದು. ಆದರೆ ಉತ್ತಮತರದ ಭೃತ್ಯನಿಗೆ ಅಧಿಕವಾಗಿ ಸಂಬಳವನ್ನು ಕೊಟ್ಟು ಇಟ್ಟುಕೊಂಡರೆ ಬಹಳ ಪ್ರಯೋಜನವುಂಟು. ಅಂಥ ಚಾಕರರಲ್ಲಿ ಕ್ರೌರ್ಯವನ್ನು ತೋರಿಸದೆ, ತಮ್ಮ ಮಕ್ಕಳಂತೆ ಅವರ ಯೋಗಕ್ಷೇಮಚಿಂತನೆಯನ್ನು ಮಾಡುತ್ತ, ವಿಶೇಷ ಸಲಿಗೆಗೆ ಆಸ್ಪದಕೊಡದೆ, ನಯ ಭಯಗಳಿಂದ ಅವರಿಂದ ಕೆಲಸ ತೆಗೆದುಕೊಳ್ಳುತ್ತ ಬರಬೇಕು.

ಕೆಲವು ಸಮಯದಲ್ಲಿ ಭೃತ್ಯನು ಸ್ವಾಮಿಕಾರ್ಯವನ್ನು ನಿರ್ವಹಿಸುವುದಕ್ಕೆ ಶಕ್ತನಾಗಿ, ಬೇರೆ ಕೆಲಸ ಮಾಡಿದರೆ ತನಗೆ ಸ್ವಲ್ಪಶ್ರಮದಿಂದಲೇ ಹೆಚ್ಚು ಸಂಬಳವು ಸಿಕ್ಕುವುದೆಂದು ಭಾವಿಸಿ ಅತೃಪ್ತನಾಗುವನು. ಆ ಕಾಲದಲ್ಲಿ ಅಂಥವನು ಮಾಡುತಿದ್ದ ಕೆಲಸವು ಹೆಚ್ಚುಸಂಬಳ ಕೊಡುವುದಕ್ಕೆ ಅರ್ಹವೇ ಅನರ್ಹವೇ ಎಂದು ಯೋಚಿಸಿ, ಅರ್ಹವೆಂದು ಕಂಡುಬಂದರೆ ಹೆಚ್ಚು ಸಂಬಳವನ್ನು ಕೊಟ್ಟು ಅವನನ್ನು ಇಟ್ಟುಕೊಳ್ಳಬೇಕು; ಹಾಗಿಲ್ಲದ ಪಕ್ಷದಲ್ಲಿ ಅವನು ಅತೃಪ್ತನಾದ ಕೂಡಲೇ ಅವನನ್ನು ತೆಗೆದುಬಿಡಬೇಕು. ಬುದ್ಧಿಶಾಲಿಯಾಗಿಯೂ ಅನುಭವಸ್ಥನಾಗಿಯೂ ಕಾರ್ಯನಿರ್ವಾಹಕನಾಗಿಯೂ ಇರತಕ್ಕ ಭೃತ್ಯನನ್ನು ಬೇಗ ತೆಗೆದುಹಾಕುವುದೂ ಲಾಭಕರವಲ್ಲ. ಯಜಮಾನನು ಇಂಥವನನ್ನು ತೆಗೆದು ಹೊಸಬನನ್ನು ನಿಯಮಿಸಿಕೊಂಡರೆ, ಅವನಿಗೆ ಅನುಭವವುಂಟಾಗಿ ಸರಿಯಾಗಿ ಕೆಲಸಮಾಡುವುದಕ್ಕೆ ತಿಳವಳಿಕೆಯುಂಟಾಗಬೇಕಾಗಿದ್ದರೆ ಬಹಳ ದಿನಗಳು ಹಿಡಿಯುತ್ತವೆ. ಅದುವರೆಗೂ ಯಜಮಾನನ ಕೆಲಸವು ಸಮಗ್ರವಾಗಿ ನಡೆಯುವುದಿಲ್ಲ. ಭೃತ್ಯನಿಗೆ ಅಭ್ಯಾಸವಿಲ್ಲದ ಕೆಲಸವನ್ನು ಕೊಟ್ಟರೆ ಅದನ್ನು ಮಾಡುವುದಕ್ಕೆ ಅವನಿಗೆ ತಿಳವಳಿಕೆಯೂ ಇರುವುದಿಲ್ಲ; ಅದರಿಂದ ಯಜಮಾನನೂ ನಷ್ಟ ಹೊಂದುವನು. ಆದುದರಿಂದ ಕೂಡಿದಮಟ್ಟಿಗೂ ಮೇಲೆ ಹೇಳಿದಂತೆ ಯೋಗ್ಯರನ್ನು ಸಂಪಾದಿಸಿಕೊಳ್ಳಬೇಕು. ಒಂದುವೇಳೆ ಕೆಲಸದಲ್ಲಿ ಅನುಭವಶಾಲಿಯಾಗಿದ್ದ

ಭೃತ್ಯನನ್ನು ತೆಗೆಯಬೇಕಾದರೆ ಮೊದಲೇ ಚೆನ್ನಾಗಿ ಯೋಚಿಸಿ ಕೆಲಸ ನಡೆಸಬೇಕು.

---

## ಲೌಭ್ಯ.

ಅತಿಲೋಭೋ ನ ಕರ್ತವ್ಯೋ ಲೋಭಃ ಸರ್ವಾರ್ಥನಾಶನಃ |
ನಾಸ್ತ್ಯೇವ ಲೋಭಯುಕ್ತಸ್ಯ ಯುಕ್ತಾಯುಕ್ತವಿವೇಚನಂ ||

ಎಲ್ಲಾ ವೆಚ್ಚಗಳಲ್ಲಿಯೂ ಕೇವಲ ಹಿಡಿತವಾಗಿದ್ದುಕೊಂಡು ಅತ್ಯಂತ ಕಾರ್ಪಣ್ಯ ಪಡುತ್ತಲಿರುವುದಕ್ಕೆ ಲೌಭ್ಯವೆಂದು ಹೆಸರು. ದ್ರವ್ಯವು ಎಲ್ಲಾ ಇಷ್ಟಾರ್ಥಗಳಿಗೂ ಸಾಧಕವಾದದ್ದು. ಧನವನ್ನು ಆರ್ಜಿಸತಕ್ಕ ಬಹುಜನರು ಇದನ್ನು ಮರೆತು ಅಸಾಧಾರಣವಾದ ಲುಬ್ಧತ್ವದಿಂದ ಹೊಟ್ಟೆ ಬಟ್ಟೆಗಳನ್ನು ಕಟ್ಟಿ ಧನವನ್ನು ಕೂಡಿಹಾಕುವರು. ಹೀಗೆ ಕೂಡಿಹಾಕುವ ಲುಬ್ಧಶಿಖಾಮಣಿಗಳು ತಮ್ಮ ದುರಾಶೆಯಿಂದ ತಾವು ಆರ್ಜಿಸಿದ್ದನ್ನು ತಾವೂ ಅನುಭವಿಸದೆ ತಮ್ಮ ಕುಟುಂಬಕ್ಕೂ ಉಪಯೋಗವಾಗುವಂತೆ ಮಾಡದೆ ಸತ್ಪಾತ್ರದಲ್ಲಿಯೂ ವಿನಿಯೋಗಿಸದೆ ಪರಿಣಾಮದಲ್ಲಿ ನಾನಾವಿಧವಾಗಿ ಛಿದ್ರವಾಗುವಂತೆ ಮಾಡಿಕೊಳ್ಳುವರು. ಹೀಗಾಗುವುದನ್ನು ನೋಡಿದರೆ ಲೋಭಿಗಳ ಮೌಢ್ಯವು ಅತ್ಯಂತ ಸಂತಾಪವನ್ನುಂಟುಮಾಡುತ್ತದೆ. ದ್ರವ್ಯಕ್ಕೆ ಕುಟುಂಬಭರಣವೂ ಶಿಷ್ಟ ಪರಿಪಾಲನೆಯೂ ಅತ್ಯಂತ ಶ್ಲಾಘ್ಯವಾದ ವಿನಿಯೋಗಗಳು. ನಾವು ಹುಟ್ಟಿದಾಗ ಜತೆಯಲ್ಲಿ ಏನನ್ನೂ ತರುವುದಿಲ್ಲ; ಹೋಗುವಾಗ ನಾವು ಸಂಪಾದಿಸಿದ್ದರಲ್ಲಿ ಪುಣ್ಯಪಾಪಗಳ ಹೊರತು ಇನ್ನೇನನ್ನೂ ತೆಗೆದುಕೊಂಡು ಹೋಗುವುದಿಲ್ಲ. ಆದುದರಿಂದ ಸರ್ವರೂ ಸ್ವಸಾಮರ್ಥ್ಯದಿಂದ ದ್ರವ್ಯವನ್ನು ಆರ್ಜಿಸುವುದರಲ್ಲಿ ಆಸಕ್ತರಾಗಿ ಆರ್ಜಿಸಿದ ದ್ರವ್ಯವನ್ನು ತಮ್ಮ ಕುಟುಂಬ ಭರಣಕ್ಕೆ ತಕ್ಕಷ್ಟು ವಿನಿಯೋಗವಾಗುವಂತೆ ಮಾಡಿಕೊಂಡು, ಉಳಿದದ್ದನ್ನು

ಇಹಪರ ಸಾಧನೆಗಳಿಗೆ ಅನುಕೂಲವಾಗುವಹಾಗೆ ಉಪಯೋಗಿಸಿ ಲುಬ್ಧರಾಗದೆ ಯಶಸ್ಸನ್ನು ಸಂಪಾದಿಸುವುದು ಶ್ರೇಯಸ್ಕರವಾದುದು.

## ಮಿತವ್ಯಯ.

ಸ್ವಕುಟುಂಬಾವಿರೋಧೇನ ಬುದ್ಧಿಮಾನ್ ವ್ಯಯಮಾಚರೇತ್ |
ದರಿದ್ರಾತಿ ದಿನೈಃ ಸ್ವಲ್ಪೈಃ ಕುಬೇರೋಪ್ಯಮಿತಾದ್ವ್ಯಯಾತ್ ||

ಜನರು ಪದಾರ್ಥಗಳನ್ನು ಕೊಂಡುಕೊಳ್ಳುವಾಗ ರೂಪಾಯಿಗಳನ್ನಾಗಲಿ ಚಿಲ್ಲರೆ ನಾಣ್ಯಗಳನ್ನಾಗಲಿ ಉಪಯೋಗಿಸುವರು. ಹೀಗುಪಯೋಗಿಸುವುದರಲ್ಲಿ ಹೆಚ್ಚಾಗಿ ಕೊಂಡುಕೊಳ್ಳುವಾಗ ರೂಪಾಯಿಗಳನ್ನೂ ಸ್ವಲ್ಪವಾಗಿ ಕೊಂಡುಕೊಳ್ಳುವಾಗ ಚಿಲ್ಲರೆ ದುಡ್ಡುಗಳನ್ನೂ ಉಪಯೋಗಿಸುತ್ತಾರೆ. ಆದರೆ ಜನಗಳು ಚಿಲ್ಲರೆದುಡ್ಡುಗಳನ್ನು ಧಾರಾಳವಾಗಿ ವೆಚ್ಚಮಾಡುವಹಾಗೆ ರೂಪಾಯಿಗಳನ್ನು ವೆಚ್ಚಮಾಡುವುದಕ್ಕೆ ಹಿಂಜರಿಯುವರು. ಹೇಗೆಂದರೆ:— ರೂಪಾಯಿಗಳನ್ನು ಮುರಿಸಿಕೊಂಡು ಪೇಟೆಗಾಗಲೀ, ಮಾರ್ಕಟ್ಟಿಗಾಗಲೀ ಹೋದರೆ ಮೊದಲು ಆವಶ್ಯಕವಾದ ಪದಾರ್ಥಗಳನ್ನು ತೆಗೆದುಕೊಳ್ಳುವರು. ಆಮೇಲೆ ಆವಶ್ಯಕವಲ್ಲದ ಹಣ್ಣು ತಿಂಡಿ ಮೊದಲಾದುವುಗಳನ್ನು ತೆಗೆದುಕೊಳ್ಳುವುದಕ್ಕೆ ಕೈಲಿರುವ ಚಿಲ್ಲರೇ ದುಡ್ಡುಗಳನ್ನು ಸ್ವಲ್ಪ ಸ್ವಲ್ಪವಾಗಿ ವೆಚ್ಚಮಾಡುವರು. ರೂಪಾಯನ್ನು ಮುರಿಸದೆ ಕೈಲಿಟ್ಟುಕೊಂಡಿದ್ದರೆ, ಆಗಲೇ ಆವಶ್ಯಕವಾಗಿ ತೆಗೆದುಕೊಳ್ಳಬೇಕಾದ ಪದಾರ್ಥಗಳು ವಿಶೇಷವಾಗಿದ್ದರೂ 'ರೂಪಾಯನ್ನು ಮುರಿಸಿಬಿಟ್ಟರೆ ಸಿಕ್ಕಿದಹಾಗೆ ವೆಚ್ಚವಾಗಿ ಈ ದಿವಸವೇ ಇದರಲ್ಲಿ ಒಂದು ಕಾಸೂ ನಿಲ್ಲದಹಾಗಾಗುತ್ತದೆ; ಇದನ್ನು ಈ ದಿನ ತೆಗೆದುಕೊಳ್ಳುವುದಕ್ಕೆ ಬದುಲಾಗಿ ನಾಳೆ ತೆಗೆದುಕೊಳ್ಳೋಣ' ಎಂದು ಹೊರಟುಹೋಗುವರು ಒಂದುವೇಳೆ ಮನೆಯಲ್ಲಿ ಯಾವುದಾದರೂ ಚಿಲ್ಲರೇ

ಪದಾರ್ಥಗಳನ್ನು ಅವಶ್ಯಕವಾಗಿ ತರಬೇಕೆಂದು ಹೇಳಿದರೆ "ಈಗ ಕೈಲಿ ಚಿಲ್ಲರೇದುಡ್ಡಿಲ್ಲ, ಹೇಗಾದರೂ ಮಾಡಿಕೊಳ್ಳಿ" ಎಂಬುದಾಗಿ ಹೇಳುವರೇ ಹೊರತು ರೂಪಾಯನ್ನು ಮುರಿಸುವುದಕ್ಕೆ ಒಪ್ಪುವುದಿಲ್ಲ. ಆದರೆ ಚಿಲ್ಲರೇ ದುಡ್ಡು ಕೈಲಿದ್ದಾಗಮಾತ್ರ ಈ ಹಿಡಿತವಿರುವುದಿಲ್ಲ. ಮನುಷ್ಯನು ವರುಷವೂ ವೆಚ್ಚಮಾಡತಕ್ಕ ಪುಡಿದುಡ್ಡುಗಳನ್ನು ಪರಿಗಣಿಸಿದರೆ ಚಿಲ್ಲರೇಬಾಬಿನಲ್ಲಿಯೇ ಅನೇಕ ರೂಪಾಯಿಗಳು ವೆಚ್ಚವಾಗಿರುತ್ತವೆ. ಹೀಗೆ ವೆಚ್ಚವಾಗಿರುವುದರಲ್ಲಿ ಅವಶ್ಯಕವಾದದ್ದಕ್ಕೂ ಅನಾವಶ್ಯಕವಾದದ್ದಕ್ಕೂ ವೆಚ್ಚವಾಗಿರುವುದನ್ನು ಬೇರೆಬೇರೆ ಮಾಡಿ ಪರೀಕ್ಷಿಸಿದರೆ ನಿರರ್ಥಕವಾದದ್ದಕ್ಕೇ ಪ್ರಾಯಶಃ ಹೆಚ್ಚು ವೆಚ್ಚವಾಗಿರುವುದು. ಆದಕಾರಣ ಪ್ರತಿ ಮನುಷ್ಯನೂ ತಾನು ಮಾಡತಕ್ಕ ವೆಚ್ಚದಲ್ಲಿ ಒಂದು ಕಾಸನ್ನೂ ಬಿಡದೆ ಪ್ರತಿದಿವಸವೂ ಬರೆಯುತ್ತ ತಿಂಗಳಿನ ಕೊನೆಯಲ್ಲಿ ತಾನು ವೆಚ್ಚಮಾಡಿದ್ದರಲ್ಲಿ ಅನಾವಶ್ಯಕವಾದದ್ದಕ್ಕೆ ಎಷ್ಟಾಗಿದೆ ಎಂಬುದನ್ನು ನೋಡುತ್ತಾ ಬರಬೇಕು. ಒಂದು ವರುಷದನಂತರ ಈ ವರುಷದಲ್ಲಿ ಅನಾವಶ್ಯಕವಾದ ಬಾಬಿನಲ್ಲಿ ಒಟ್ಟು ಎಷ್ಟು ಖರ್ಚಾಗಿದೆ ಎಂಬುದನ್ನು ನೋಡಿಕೊಳ್ಳಬೇಕು. ಹೀಗೆ ಮಾಡುವುದರಿಂದ ಅನಾವಶ್ಯಕವಾದ ಬಾಬಿನಲ್ಲಿ ವೆಚ್ಚವಾಗತಕ್ಕುದನ್ನು ನಿಲ್ಲಿಸಿ ಮಿತವಾಗಿ ನಡೆದುಕೊಳ್ಳುವ ಅಭ್ಯಾಸವಾಗುವುದು.

ಆದರೆ, ಜನರು ಸೌಖ್ಯವನ್ನು ಹೊಂದಬೇಕಾದರೆ ಅತ್ಯಾವಶ್ಯಕವಾದ ಬಾಬುಗಳಲ್ಲಿ ಸರಿಯಾಗಿ ವೆಚ್ಚಮಾಡುತ್ತಾ ಅನಾವಶ್ಯಕವಾದುವುಗಳಲ್ಲಿ ಹಿಡಿತವುಳ್ಳವರಾಗಿರಬೇಕು. ಹೀಗೆ ನಡೆಯುತಕ್ಕ ಜನಗಳು ಕಷ್ಟಗಳಿಗೆ ಗುರಿಯಾಗುವುದಿಲ್ಲ. ಮಿತಿಮೀರಿ ವೆಚ್ಚಮಾಡಿ ಸಾಲಗಾರರಾಗತಕ್ಕ ಜನರು ತಾವು ಮಿತವ್ಯಯಮಾಡುತ್ತಿರುವಂತೆ ತಿಳಿದುಕೊಳ್ಳುವುದುಂಟು. ಇಂಥ ಜನರಲ್ಲಿ ಅನೇಕರಿಗೆ ಇದು ಮಿತವ್ಯಯವೆಂದೂ ಇದು ಮಿತವ್ಯಯವಲ್ಲವೆಂದೂ ತಿಳಿದಿರುವುದೇ ಅಪೂರ್ವ. ಅನೇಕರು ತಮ್ಮ ಮನೆಯಲ್ಲಿ ಕೂಲಿಮಾಡತಕ್ಕ

ವರಿಗೆ ಕೊಡುವುದರಲ್ಲಿ ಕೈಹಿಡಿದುಕೊಟ್ಟರೆ ಮಿತವ್ಯಯವೆಂದು ತಿಳಿದು ಕೊಂಡಿರುವರು. ಇನ್ನು ಕೆಲವರು ಕಾರ್ಪಣ್ಯದಿಂದ ಜೀವಿಸುವುದೇ ಮಿತ ವ್ಯಯವೆಂದು ಭಾವಿಸಿರುವರು. ಇದೊಂದೂ ಸರಿಯಲ್ಲ. ಮಿತವ್ಯಯವೆಂದರೆ ಆವಶ್ಯಕವಾದ ಸಂಗತಿಗಳಲ್ಲಿ ಕಡಿಮೆಮಾಡುವುದಲ್ಲ. ಕೆಲಸಮಾಡತಕ್ಕ ವರಿಗೆ ಅವರ ಕಷ್ಟಕ್ಕೆ ತಕ್ಕಹಾಗೆ ಸಾವಕಾಶಮಾಡದೆ ಕ್ಲೃಪ್ತವಾದ ಕಾಲ ಗಳಲ್ಲಿ ಸಂಬಳ ಮೊದಲಾದುವುಗಳನ್ನು ಕೊಡುತ್ತಬಂದಹೊರತು ಅವರು ಮನಃಪೂರ್ವಕವಾಗಿ ಕೆಲಸಮಾಡುವುದಿಲ್ಲ. ಅದರಿಂದ ಯಜಮಾನನಿಗೆ ನಷ್ಟವೇಹೊರತು ಆದಾಯವಾಗುವುದಿಲ್ಲ. ಗೃಹಕೃತ್ಯದಲ್ಲಿ ಮಿತವಾಗಿ ವ್ಯಯಮಾಡಬೇಕೆಂಬ ತಾತ್ಪರ್ಯವುಳ್ಳವರು ವೆಚ್ಚವಾಗತಕ್ಕುವುಗಳನ್ನೆಲ್ಲಾ ಒಂದು ಪಟ್ಟಿಯಲ್ಲಿ ಬರೆದುಕೊಂಡು ಗೃಹಕೃತ್ಯದಲ್ಲಿರತಕ್ಕವರೆಲ್ಲರೂ ಅನ್ನ ವಸ್ತ್ರಗಳಿಗೆ ನ್ಯೂನತೆಯಿಲ್ಲದಂತೆ ಸೌಖ್ಯವಾಗಿರುವುದಕ್ಕೆ ಯಾವುವು ಆವ ಶ್ಯಕವಾದುವುಗಳು ಯಾವುವು ಅನಾವಶ್ಯಕವಾದುವುಗಳು ಎಂಬುದನ್ನು ಮೊದಲೇ ನಿಷ್ಕರ್ಷೆಮಾಡಿಕೊಳ್ಳಬೇಕು. ದೇಹದಾರ್ಢ್ಯಕ್ಕಾವಶ್ಯಕವಾದುವು ಗಳಲ್ಲಿ ನ್ಯೂನತೆಯನ್ನು ಮಾಡಿಕೊಳ್ಳುವುದು ಮಿತವ್ಯಯಕ್ಕೆ ಸೇರುವು ದಿಲ್ಲ. ಇದು ಮಿತವ್ಯಯ ಇದು ಅಮಿತವ್ಯಯ ಎಂಬ ಅಂಶಗಳನ್ನು ವಿಚಾರ ಮಾಡುತಹೋದರೆ ಪ್ರಾಯೇಣ ಅದು ಎಲ್ಲರಿಗೂ ಗೊತ್ತಾಗಿಯೇ ಆಗು ವುದು.ಜನರು ಇದನ್ನು ಚೆನ್ನಾಗಿ ತಿಳಿದುಕೊಳ್ಳುವುದು ಅತ್ಯಾವಶ್ಯಕ ವಾದುದು.

# ದುಂದುಗಾರಿಕೆ.

ನ ಸ್ವಲ್ಪಸ್ಯ ಕೃತೇ ಭೂರಿ ನಾಶಯೇನ್ಮತಿಮಾನ್ ನರಃ |
ಏತದೇವ ಹಿ ಪಾಂಡಿತ್ಯಂ ಯತ್ ಸ್ವಲ್ಪಾದ್ಭೂರಿರಕ್ಷಣಂ ||

ತಮ್ಮ ಯೋಗ್ಯತೆಗೆ ತಕ್ಕಷ್ಟು ವೆಚ್ಚ ಮಾಡದೆ ಅಧಿಕವಾಗಿ ವೆಚ್ಚ ಮಾಡುವುದಕ್ಕೆ ದುಂದುಗಾರಿಕೆಯೆಂದು ಹೆಸರು. ಇದು ಜಂಭವಾಗಿ ನಡೆಯು ತಕ್ಕವರನ್ನು ನೋಡುವುದರಿಂದಲೂ, ಸಂದರ್ಭಾನುಸಾರ ಸ್ತೋತ್ರಗಳಗೆ ಉಬ್ಬಿ ಪ್ರತಿಷ್ಠೆಯನ್ನು ಪಡೆಯಬೇಕೆಂಬ ಅಪೇಕ್ಷೆಯುಂಟಾಗುವುದರಿಂದಲೂ, ಯೋಗ್ಯತೆಮೀರಿ ವೆಚ್ಚ ಮಾಡದಿದ್ದರೆ ಹವ್ಯಕವ್ಯಾದಿಗಳ ಫಲವುಂಟಾಗು ವುದಿಲ್ಲವೆಂದು ಪ್ರೋತ್ಸಾಹಿಸತಕ್ಕವರ ಪ್ರೇರಣೆಗೊಳಗಾಗುವುದರಿಂದಲೂ ಉತ್ಪನ್ನವಾಗುವುದು. ಈ ದುಂದುಗಾರಿಕೆಯು ಮನಸ್ಸಿನಲ್ಲಿ ನೆಲೆಗೊಂಡಮೇಲೆ ತನ್ನ ಬಂಧುಗಳಲ್ಲಿಯೂ ಪರಿಚಿತರಲ್ಲಿಯೂ ನೆರೆಹೊರೆಯುವರಲ್ಲಿಯೂ ಪ್ರತಿಷ್ಠೆಪಡೆಯಬೇಕೆಂಬುದಾಗಿ ತೋರುವುದು. ಇದು ಉತ್ಪನ್ನವಾದಮೇಲೆ ಪ್ರತಿಯೊಂದುಸಂಗತಿಯಲ್ಲಿಯೂ ಮಿತವಾಗಿ ನಡೆದರೆ ನೋಡಿದವರು ಜಿಪುಣ ನೆನ್ನುತ್ತಾರೆಯೇನೋ ಎಂಬುದಾಗಿ ಯೋಗ್ಯತೆಯನ್ನು ಮೀರಿ ವೆಚ್ಚ ಮಾಡ ತಕ್ಕ ರೂಢಿಯು ವಿಶೇಷವಾಗಿ ನೆಲೆಗೊಳ್ಳುವುದು. ಧನಿಕರಾದವರು ಅವರ ಯೊಗ್ಯತೆಗೆ ತಕ್ಕಹಾಗೆ ನಡೆದರೆ, ಬಡವರಾದವರು "ಹುಲಿಯನ್ನು ನೋಡಿ ನರಿ ಬರೇಹಾಕಿಕೊಂಡಿತು" ಎಂಬ ಲೋಕೋಕ್ತಿಯಂತೆ ಸಾಲವನ್ನಾದರೂ ಮಾಡಿ ತನ್ನ ಯೋಗ್ಯತೆಗೆ ಮಿಂಚಿ ಹವ್ಯಕವ್ಯಾದಿಗಳನ್ನು ಚೆನ್ನಾಗಿ ಮಾಡಿ ದರೆ ಬಳ್ಳೇ ಹೆಸರುವಾಸಿಯುಂಟಾಗುವುದೆಂಬ ಭಾವನೆಯಿಂದ ಮನಸ್ವಿ ಯಾಗಿ ವೆಚ್ಚ ಮಾಡುವರು.

ದುಂದುಗಾರಿಕೆಯಿಂದ ನಡೆಯುವವರಿಗೆ ಎಷ್ಟು ಉಲ್ಲಾಸವೂ ಪ್ರತಿ ಷ್ಠೆಯೂ ಉಂಟಾಗುವುವೋ ಕೊನೆಗೆ ಅಷ್ಟು ಕಿರಿಕಿರಿಯೂ ಅಪಮಾನವೂ

ಉಂಟಾಗುವುವು. ನಮ್ಮ ಹಿರಿಯರು ಈ ವಿಷಯದಲ್ಲಿ ನಾವು ಹೀಗೆಲ್ಲಾ ಕೆಡುವೆವೆಂಬ ತಾತ್ಪರ್ಯದಿಂದಲೇ ಧರ್ಮಶಾಸ್ತ್ರಗಳಲ್ಲಿಯೂ ಕ್ಷೇಮಕರವಾದ ಮಾರ್ಗಗಳನ್ನು ಕಲ್ಪಿಸಿದ್ದಾರೆ. ಐಶ್ವರ್ಯವಂತರು ಸಾಲಂಕಾರಕನ್ಯಾದಾನವನ್ನು ಮಾಡಿದರೆ ಬಡವರಾದವರು ಒಂದು ಹೂವನ್ನಾಗಲಿ ತುಳಸೀದಳವನ್ನಾಗಲಿ ಇಟ್ಟು ಕನ್ಯಾದಾನಮಾಡುವುದರಿಂದ ಸಾಲಂಕಾರಕನ್ಯಾದಾನದ ಫಲವೇ ಬರುವುದು. ದುಂದುಗಾರರಾದವರು ಹವ್ಯಕವ್ಯಾದಿಗಳಲ್ಲಿ ಅನೇಕ ವಿಧವಾದ ಭಕ್ಷ್ಯ ಭೋಜ್ಯ ಲೇಹ್ಯ ಚೋಷ್ಯ ಪೇಯಗಳನ್ನು ವಿಶೇಷವಾಗಿ ಮಾಡಿಸಿ ಪ್ರತಿಷ್ಠೆಪಡೆಯಬೇಕೆಂಬುದಾಗಿ ಮಿತಿಮೀರಿ ಪ್ರಯತ್ನಪಡುವರು. ತಾರತಮ್ಯವನ್ನರಿತವರು ಪರರ ಸ್ತುತಿಗೆ ಬೆರಗಾಗದೆ ಅನ್ಯರ ಆಡಿಕೆಗೆ ಅಂಜದೆ ತಮ್ಮ ಯೋಗ್ಯತೆಗೆ ತಕ್ಕಷ್ಟು ವೆಚ್ಚಮಾಡಿ ಶಾಸ್ತ್ರೋಕ್ತವಾಗಿಯೂ ಸಂಪ್ರದಾಯಪ್ರಕಾರವಾಗಿಯೂ ನಡೆಯಬೇಕಾದ ಕಾರ್ಯಗಳನ್ನು ಯಥಾಶಕ್ತಿಯಾಗಿ ನಡೆಸಿ ಯಾವ ತೊಂದರೆಗಳಿಗೂ ಒಳಗಾಗದೆ ಕೃತಕೃತ್ಯರಾಗುವರು.

ಲೋಕದಲ್ಲಿ ಜನರ ಸ್ತುತಿಗೆ ಬೆರಗಾಗಿ ಆಡಿಕೆಗೆ ಹೆದರಿ ಆವಶ್ಯಕವಾಗಿ ಮಾಡಬೇಕಾದ ಕೆಲಸಗಳನ್ನು ಬಿಟ್ಟು ಅನಾವಶ್ಯಕವಾದ ಕೆಲಸಗಳನ್ನು ಮಾಡತಕ್ಕವರು ಹೇಡಿಗಳೇಹೊರತು ಪೂರ್ವಾಪರಜ್ಞರೆಂದು ಹೇಳಿಸಿಕೊಳ್ಳಲಾರರು. ದುಂದುಗಾರಿಕೆಯಿಂದ ದರಿದ್ರರಾಗಿ ಧನಾರ್ಜನೆಯನ್ನು ಮಾಡುವುದಕ್ಕೆ ಸಾಮರ್ಥ್ಯವಿಲ್ಲದಂಥವರನ್ನೂ ಅವರ ಕುಟುಂಬದವರನ್ನೂ 'ಇವರು ಜನರನ್ನು ಕಣ್ಣೆತ್ತಿಕೂಡ ನೋಡದೆ ಮೆರೆಯುತ್ತಿದ್ದುದಕ್ಕೆ ತಕ್ಕಹಾಗೆ ಆಯಿತು' ಎಂದು ಆಡಿಕೊಳ್ಳುವರು. ಆದುದರಿಂದ ಯಾವ ಕಾರ್ಯದಲ್ಲಿಯೇಆಗಲಿ ತಮ್ಮ ಶಕ್ತಿಗೆ ತಕ್ಕಂತೆ ಪೂರ್ವಾಪರಜ್ಞತೆಯಿಂದ ನಡೆದುಕೊಳ್ಳದೆ ದುಂದುಗಾರಿಕೆಯಿಂದ ನಡೆದು ತಮ್ಮ ಕುಟುಂಬದವರ ಅನ್ನ ವಸ್ತ್ರಗಳಿಗೆ ನ್ಯೂನತೆಯನ್ನುಂಟುಮಾಡುವುದು ಮಹಾಪಾತಕವು.

ಈ ತಪ್ಪಿತದಿಂದ ಅನೇಕ ಉಪಪಾತಕಗಳು ಸಂಘಟಿಸುವುವು. ಕುಟುಂಬ ದವರ ಅನ್ನ ವಸ್ತ್ರಗಳಿಗೆ ನ್ಯೂನತೆಯುಂಟಾದರೆ ಅಂಥ ಕುಟುಂಬದವರು ದುಷ್ಕಾರ್ಯಗಳನ್ನು ಮಾಡುವುದಕ್ಕೆ ಯತ್ನಿಸುವರು. ಮಾನಿಷ್ಠರಾದರೆ ಉಪ ವಾಸಾದಿಗಳಿಂದ ಅಕಾಲ ಮರಣವನ್ನಾದರೂ ಹೊಂದುವರು. ಹೀಗೆ ಸಂಭವಿಸಿದ ಪಾತಕಗಳಿಗೆ ದುಂದುಗಾರಿಕೆಯಿಂದ ನಡೆದವನು ಗುರಿಯಾಗು ವನು. ಆದಕಾರಣ ತಮ್ಮವರ ಮಾನವನ್ನರಿತು ಯುಕ್ತಾಯುಕ್ತ ವಿವೇಚನೆಯಿಲ್ಲದೆ ಹೆಚ್ಚಾಗಿ ವೆಚ್ಚಮಾಡತಕ್ಕವರ ಅವಸ್ಥೆಯು ಕೊನೆಗೆ ಅನರ್ಥದಲ್ಲಿ ಪರಿಣಮಿಸುವುದು. ಸಾಮಾನ್ಯವಾದ ವರಮಾನವುಳ್ಳವರು ದೊಡ್ಡವರಂತೆ ತಾವು ನಡೆಯಬೇಕೆಂಬುದಾಗಿ ಅಪೇಕ್ಷಿಸದೆತಮ್ಮ ಆಯತಿಗೆ ಅನುಗುಣವಾದ ವ್ಯಯವನ್ನು ಮಾಡುತ್ತ ಬರುವುದೇ ಕರ್ತವ್ಯವೆಂದು ನಿಶ್ಚಯಿಸಿಕೊಂಡು ನಡೆಯುತಿದ್ದರೆ ಅವರಿಗೆ ಇಹದಲ್ಲಿ ಸುಖವೂ ಪರದಲ್ಲಿ ಗತಿಯೂ ಉಂಟಾಗುವುವು. ಆದುದರಿಂದ ಎಲ್ಲಾ ಕುಟುಂಬಾಧಿಪತಿಗಳೂ ತಮ್ಮತಮ್ಮ ಆಯತಿಗೆ ಅನುಸಾರವಾಗಿ ಇದ್ದುಕೊಂಡಿರುವುದೇ ಶ್ರೇಯ ಸ್ಕರವಾದದ್ದು.

ಜಾತಕರ್ಮ ನಾಮಕರಣ ಚೌಲ ಉಪನಯನ ವಿವಾಹ ಮುಂತಾದು ವುಗಳು ನಮ್ಮಲ್ಲಿ ಪೂರ್ವಕರ್ಮಗಳೆಂದೆನ್ನಿಸಿಕೊಳ್ಳುವುವು. ನಮ್ಮ ಜನರು ಈ ಶುಭಕಾರ್ಯಗಳನ್ನು ಮಾಡುವ ಸಂದರ್ಭಗಳಲ್ಲಿ ದುಂದುಗಾರಿಕೆಯಿಂದ ದ್ರವ್ಯವನ್ನು ವೆಚ್ಚಮಾಡುತ್ತಾರೆ. ಬುದ್ಧಿಶಾಲಿಗಳು ಬಹುಕಾಲದಿಂದ ನಾನಾ ಮಾರ್ಗಗಳಿಂದ ದ್ರವ್ಯವನ್ನು ಕೂಡಿಹಾಕಿಕೊಂಡಿದ್ದು ಈ ಕಾರ್ಯಗಳನ್ನು ನೆರವೇರಿಸುವರು. ಇನ್ನು ಕೆಲವರು ಈ ಕೆಲಸಗಳಿಗಾಗಿ ತಾವು ಆರ್ಜಿ ಸಿದ ಧನದ ಜತೆಗೆ ಸಾಲವನ್ನೂ ಮಾಡುವರು. ಮತ್ತೆ ಕೆಲವರು ಇವು ಗಳಿಗೋಸ್ಕರ ದ್ರವ್ಯವನ್ನು ಸ್ವಲ್ಪವೂ ಸೇರಿಸಲಾರದೆ ಸಾಲವನ್ನೇ ಮಾಡು ವರು. ಹೀಗೆ ಮಾಡಿದ ಸಾಲಗಳಿಗೆ ಬಡ್ಡಿಯನ್ನು ತೆರುವುದಲ್ಲದೆ ಈ

ಕೆಲಸಗಳಿಗಾಗಿ ಅಂಗಡಿಯಲ್ಲಿ ಸಾಲವಾಗಿ ತಂದ ಪದಾರ್ಥಗಳಿಗೆ ಒಂದಕ್ಕೆ ಎರಡಾಗಿ ತೆತ್ತು ನಷ್ಟಪಡುತ್ತಲಿರುವರು. ಇದಕ್ಕಾಗಿ ಮಾಡಿದ ಸಾಲಗಳಿಗೆ ತಮ್ಮ ಗ್ರಾಮ ಭೂಮಿ ಮೊದಲಾದುವುಗಳನ್ನು ಆಧಾರವಾಗಿಯೋ ಭೋಗ್ಯವಾಗಿಯೋ ಮಾಡುವರು; ಅಥವಾ ಒಡವೆ ವಸ್ತುಗಳನ್ನು ಒತ್ತೆಯಾದರೂ ಇಡುವರು. ಇದೊಂದಕ್ಕೂ ಮಾರ್ಗವಿಲ್ಲದವರು ಸಾಲಕೊಟ್ಟವನ ಬಳಿ ತಾವೇ ಸೇವಕರಾಗಿಯಾದರೂ ಸೇರುವರು. ಹೀಗೆ ಜನರು ಪೂರ್ವಕರ್ಮಗಳಿಗಾಗಿ ದುಂದುಗಾರತನದಿಂದ ವೆಚ್ಚಮಾಡಿ ನಾನಾಪ್ರಕಾರವಾದ ತೊಂದರೆಗಳನ್ನು ಅನುಭವಿಸುವರು.

ಹೀಗೆ ಮಾಡಬೇಕೆಂದು ನಮ್ಮ ಶಾಸ್ತ್ರಗಳಲ್ಲಿ ನಿರ್ಬಂಧವಿಲ್ಲ; ನಮ್ಮ ಹಿರಿಯರ ಏರ್ಪಾಡೂ ಹೀಗಿಲ್ಲ. ಶಾಸ್ತ್ರಜ್ಞರೂ ಹಿರಿಯರೂ ಮಾಡಿರುವ ಏರ್ಪಾಡುಗಳು ಸುಲಭವಾಗಿಯೂ ಅನುಕೂಲವಾಗಿಯೂ ಇವೆ. ದುಂದುಗಾರತನದಿಂದ ಪ್ರವರ್ತಿಸತಕ್ಕ ನಡವಳಿಕೆಗಳು ಜನರು ಒಬ್ಬರನ್ನು ನೋಡಿ ಮತ್ತೊಬ್ಬರು ತಾವಾಗಿಯೇ ಮಾಡಿಕೊಂಡುವುಗಳಾಗಿರುತ್ತವೆ. ಉತ್ತರ ದೇಶದಲ್ಲಿ ವಿವಾಹದಲ್ಲಿ ವರದಕ್ಷಿಣೆಯನ್ನು ಕೊಡುವುದಕ್ಕೆ ಉಪಪತ್ತಿಯಿಲ್ಲದೆ ಅನೇಕರು ತಮ್ಮ ಹೆಣ್ಣುಮಕ್ಕಳನ್ನು ಕೊಲ್ಲುತ್ತಿದ್ದರು. ಈಗ ವಿವಾಹದ ವಿಷಯದಲ್ಲಿ ವಿಶೇಷ ವೆಚ್ಚವಾಗದಂತೆ ನಡೆಯುವ ಹಾಗೆ ಆ ದೇಶೀಯರಲ್ಲಿ ಕೆಲವರು ಸಂಕೇತಗಳನ್ನು ಮಾಡಿಕೊಂಡಿದ್ದಾರೆ. ಆದರೂ ಅನೇಕರಲ್ಲಿ ಏಕಾಂತವಾಗಿ ಹೆಣ್ಣುಮಕ್ಕಳನ್ನು ಕೊಲ್ಲತಕ್ಕ ಸಂದರ್ಭವು ಇನ್ನೂ ತಪ್ಪಲಿಲ್ಲ. ನಮ್ಮ ದೇಶದಲ್ಲಿ ಅದಕ್ಕೆ ಬದುಲಾಗಿ ಹೆಣ್ಣಿಗೆ ಒಡವೆಗಳನ್ನು ಇಡುವುದರಲ್ಲಿಯೂ ಕನ್ಯಾಶುಲ್ಕವನ್ನು ತೆರುವುದರಲ್ಲಿಯೂ ವರನೋ ಅಥವಾ ಅವನ ಕಡೆಯವರೋ ಅನೇಕ ಕಷ್ಟಗಳಿಗೆ ಗುರಿಯಾಗುತ್ತಲಿದ್ದರು. ಈಚೆಗೆ ವಿದ್ಯಾವಂತನಾದ ವರನನ್ನು ಅಪೇಕ್ಷಿಸತಕ್ಕವರು ಸಾವಿರಾರು ರೂಪಾಯಿಗಳನ್ನು ಕೊಟ್ಟು ಅವನನ್ನು ಕೊಂಡು

ಕೊಳ್ಳಬೇಕಾಗಿದೆ. ಇದಲ್ಲದೆ ವಧೂವರರಿಬ್ಬರಕಡೆಯುವರೂ ವಿವಾಹ ಕಾಲದಲ್ಲಿ ಅನಾವಶ್ಯಕವಾದ ವೆಚ್ಚಗಳಿಂದ ಸಾಲಗಾರರ ಪಾಲಾಗುತ್ತಲಿದ್ದಾರೆ

ಹೀಗೆ ಉಪನಯನ ವಿವಾಹ ಮೊದಲಾದ ಕರ್ಮಗಳಲ್ಲಿ ದುಂದುಗಾರತನದಿಂದ ವಿಶೇಷ ವೆಚ್ಚಮಾಡಿ ಇದಕ್ಕಾಗಿ ಸಾಲಮಾಡುವುದೂ ಈ ಸಾಲಕ್ಕಾಗಿ ಗ್ರಾಮ ಭೂಮಿ ಮನೆ ಮೊದಲಾದುವುಗಳನ್ನು ಈಡುಮಾಡಿ ಕೊನೆಗೆ ಬಡ್ಡಿಯನ್ನು ತೆರುವುದಕ್ಕೆ ಶಕ್ತಿಸಾಲದೆ ಅವುಗಳನ್ನೆಲ್ಲಾ ಕಳೆದುಕೊಂಡು ಕೇವಲ ಹೀನಸ್ಥಿತಿಗೆ ಬರುವುದೂ ಸರಿಯಾದುದಲ್ಲ. ಸಕಲರೂ ತಮ್ಮ ಯೋಗ್ಯತಾನುಸಾರವಾಗಿ ಇವುಗಳನ್ನು ವಿಧಿವತ್ತಾಗಿಯೂ ತಮ್ಮ ಆಯತಿಗೆ ತಕ್ಕಂತೆಯೂ ನಡೆಸತಕ್ಕ ಮಾರ್ಗಗಳನ್ನು ಆಚರಣೆಯಲ್ಲಿ ತರುವವರೆಗೂ ನಮ್ಮ ಜನರು ವೃದ್ಧಿಗೆ ಬರುವುದಿಲ್ಲ.

ಹೀಗೆ ಅಮಿತವಾದ ವೆಚ್ಚದಿಂದ ನಡೆಯುತಕ್ಕುವು ವಿವಾಹಾದಿ ಪೂರ್ವ ಕರ್ಮಗಳು ಮಾತ್ರವೇ ಅಲ್ಲ. ಕಾಲಾಧೀನರಾದವರಿಗೋಸ್ಕರ ನಡೆಯತಕ್ಕ ಕರ್ಮಗಳಲ್ಲಿಯೂ ತಮ್ಮ ಯೋಗ್ಯತೆಯನ್ನು ಮೀರಿ ವೆಚ್ಚಮಾಡುವುದು ರೂಢಿಯಾಗಿರುವುದು. ಕುಟುಂಬದ ಯಜಮಾನನು ಗತಿಸಿದರೆ ಆ ಕುಟುಂಬಕ್ಕೆ ಅವನಿಂದ ಆಗುತ್ತಿದ್ದ ಆರ್ಜನೆಯು ತಪ್ಪುವುದು. ಆಗ ಆ ಕುಟುಂಬ ಭರಣಕ್ಕೂ ಅವನ ಉತ್ತರಕ್ರಿಯೆಗಳಿಗೂ ಸಾಲಮಾಡಬೇಕಾಗಿಬರುವುದು. ಬಡ್ಡಿಯನ್ನು ಕೊಟ್ಟು ಸಾಲತೆಗೆದ ಹಣವನ್ನು ದೂರದೃಷ್ಟಿಯಿಲ್ಲದೆ ವೆಚ್ಚಮಾಡುವುದರಿಂದ ಆ ಕುಟುಂಬದ ಜನರು ಕ್ರಮೇಣ ಕಷ್ಟದಶೆಗೆ ಬರುವರು. ಪುಣ್ಯವಂತರಾಗಿರುವವರು ಇದಕ್ಕಾಗಿ ಯೋಗ್ಯತೆಮೀರಿ ವೆಚ್ಚಮಾಡಿ ಕ್ರಮೇಣ ತಮ್ಮ ಉಪಪತ್ತಿಗೆ ಆಧಾರಭೂತವಾದ ಮೂಲಧನವನ್ನು ಕಡಿಮೆ ಮಾಡಿಕೊಳ್ಳುವರು.

ನಾವು ಮಾಡತಕ್ಕ ದಾನಧರ್ಮಗಳು ಕಾಲಾಧೀನನಾದವನಿಗೆ ಸದ್ಗತಿಯನ್ನುಂಟುಮಾಡುವುವೆಂಬುದಾಗಿಯೂ, ಕಾಲಾಧೀನನಾದವನು ಲೋಕಾಂ

ತರಕ್ಕೆ ಹೋಗುವಾಗ ಇದರಿಂದ ಪ್ರಯೋಜನವನ್ನು ಹೊಂದುತ್ತಾನೆಂಬು ದಾಗಿಯೂ ಈ ವೆಚ್ಚವನ್ನು ಮಾಡುವೆವು. ಆದರೆ ಉತ್ತರಕ್ರಿಯೆಗಳನ್ನು ಮಾಡತಕ್ಕವರು ತಮ್ಮ ಉಪಪತ್ತಿಗೆ ಅನುಗುಣವಾಗಿ ವೆಚ್ಚಮಾಡಿ ಕ್ರಿಯಾ ಪೂರ್ತಿಮಾಡಿಕೊಳ್ಳಬಹುದೆಂದು ನಮ್ಮ ಶಾಸ್ತ್ರಗಳಲ್ಲಿಯೇ ಹೇಳಲ್ಪಟ್ಟಿರು ತ್ತದೆ. ಹೀಗಿದ್ದರೂ ಈ ಕರ್ಮಗಳನ್ನು ಮಾಡಿಸುವ ವ್ಯಾಜದಿಂದ ಜೀವಿ ಸುವ ಜನರು, ಪ್ರಿಯರಾದವರನ್ನು ಕಳೆದುಕೊಂಡು ದುಃಖಾತಿಶಯದಿಂದ ಸಂತಪಿಸುತ್ತಲಿರುವವರನ್ನು ಆಗಣ ಕರ್ಮಗಳಲ್ಲಿ ವಿಶೇಷ ದ್ರವ್ಯವ್ಯಯಮಾ ಡುವಂತೆ ನಾನಾವಿಧವಾಗಿ ಪ್ರೇರಿಸಿ ತಮ್ಮ ದಾರಿಗೆಳೆದುಕೊಂಡು ಅವರನ್ನು ಸಾಲಕ್ಕೆ ಗುರಿಮಾಡುತ್ತಾರೆ ಮನುಷ್ಯನು ತಾನು ಜೀವಂತನಾಗಿರುವಾಗ ಮಾಡಿದ ಪುಣ್ಯಪಾಪಗಳಿಗೆ ಅನುರೂಪವಾದ ಫಲಗಳನ್ನು ಅನುಭವಿಸಲೇ ಬೇಕೆಂದು ಶ್ರುತಿ ಸ್ಮೃತಿ ಪುರಾಣೇತಿಹಾಸಗಳಲ್ಲಿ ಧಾರಾಳವಾಗಿ ಹೇಳಲ್ಪ ಟ್ಟಿವೆ. ಆದುದರಿಂದ ಇಂಥ ವೆಚ್ಚಗಳ ಸಮಯಗಳಲ್ಲಿ ಈ ವಿಷಯವನ್ನು ಪರ್ಯಾಲೋಚಿಸಿ ಯೋಗ್ಯತಾನುಸಾರ ನಡೆದುಕೊಳ್ಳುವುದು ಎಲ್ಲರಿಗೂ ಕ್ಷೇಮಕರವಾದದ್ದು.

---

## ಭೂಷಣ.

ಕೇಯೂರಾಣಿ ನ ಭೂಷಯನ್ತಿ ಪುರುಷಂ ಹಾರಾನ ಚನ್ದ್ರೋಜ್ವಲಾಃ
ನ ಸ್ನಾನಂ ನ ವಿಲೇಪನಂ ನ ಕುಸುಮಂ ನಾಲಂಕೃತಾಮೂರ್ಧಜಾಃ |
ವಾಣ್ಯೇಕಾ ಸಮಲಂಕರೋತಿ ಪುರುಷಂ ಯಾ ಸಂಸ್ಕೃತಾ ಧಾರ್ಯತೇ
ಕ್ಷೀಯನ್ತೇಖಿಲಭೂಷಣಾನಿ ಸತತಂ ವಾಗ್ಭೂಷಣಂ ಭೂಷಣಂ ||

ಜನರು ಚಿನ್ನ ಬೆಳ್ಳಿ ರತ್ನ ಮೊದಲಾದುವುಗಳಿಂದ ಮಾಡಲ್ಪಟ್ಟ ನಾನಾವಿಧವಾದ ಆಭರಣಗಳನ್ನೂ, ನೂಲು ರೇಷ್ಮೆ ಜರತಾರಿ ಮೊದಲಾದುವು

ಗಳಿಂದ ಮಾಡಿರತಕ್ಕ ಬಗೆಬಗೆಯಾದ ಉಡುಗೆಗಳನ್ನೂ ಧರಿಸುವುದು ಪ್ರಸಿದ್ಧವಾಗಿಯೇ ಇದೆ. ಆದರೆ ಸ್ತ್ರೀಯರು ತಮ್ಮ ಯೋಗ್ಯತೆಯನ್ನು ಮೀರಿ ಆಭರಣಗಳನ್ನೂ ಬೆಲೆಯುಳ್ಳ ವಸ್ತ್ರಗಳನ್ನೂ ಧರಿಸಿಕೊಳ್ಳದಿದ್ದರೆ ತಮಗೆ ಪ್ರತಿಷ್ಠೆಯುಂಟಾಗಲಾರದೆಂದು ಭಾವಿಸಿ ಒದ್ದಾಡುತ್ತಾರೆ. ಮದುವೆಗಳಲ್ಲಿ ಅನೇಕರು „ ಒಡವೆಗಳನ್ನೂ ವಸ್ತ್ರಗಳನ್ನೂ ತಂದಹೊರತು ಹೆಣ್ಣನ್ನು ಕೊಡುವುದಿಲ್ಲ, ಒಡವೆ ವಸ್ತ್ರಗಳು ಇಲ್ಲದಿದ್ದರೆ ಉಭಯರಿಗೂ ಜನರಲ್ಲಿ ಗೌರವವಾಗಿರದು " ಎಂದು ಬಲವಂತಪಡಿಸುವುದೂ, ಎಳೇಮಕ್ಕಳಿಗೆ ಒಡವೆಗಳನ್ನಿಟ್ಟ ಹೊರತು ಅವರ ಅಂದವು ಪ್ರಕಾಶಿಸಲಾರದೆಂಬುದಾಗಿ ಮನೆಯ ಯಜಮಾನನನ್ನು ಪೀಡಿಸುವುದೂ, ಹಬ್ಬಹರಿದಿನಗಳಲ್ಲಿಯೂ ಶುಭಕರ್ಮಗಳು ನಡೆಯುತಕ್ಕ ಕಾಲಗಳಲ್ಲಿಯೂ ಎರವಲಾಗಿಯಾದರೂ ಒಡವೆಗಳನ್ನೂ ಬೆಲೆಯುಳ್ಳ ಉಡುಗೆಗಳನ್ನೂ ತೆಗೆದುಕೊಂಡುಬಂದು ಅಲಂಕರಿಸಿಕೊಳ್ಳುವುದೂ ರೂಢಿಯಾಗಿವೆ. ಕೇವಲ ರಿಕ್ತದಶೆಯಲ್ಲಿರುವವರು ಕೂಡ ತಮ್ಮ ಆಶಾಪೂರ್ತಿಗಾಗಿ ಚಿನ್ನಕ್ಕೆ ಬದುಲಾಗಿ ಹಿತ್ತಾಳೆಯನ್ನೂ ರತ್ನಗಳಿಗೆ ಬದುಲಾಗಿ ಗಾಜಿನ ಹರಳನ್ನೂ ಮುತ್ತಿಗೆ ಬದುಲಾಗಿ ಬೊಂಬಾಯಿ ಮುತ್ತುಗಳನ್ನೂ ಉಪಯೋಗಿಸಿರುವ ಗಿಲೀಟಿನ ಒಡವೆಗಳನ್ನು ಇದ್ದದ್ದರಲ್ಲಿ ಕೊಂಡುಕೊಂಡು ಅಲಂಕರಿಸಿಕೊಳ್ಳುವರು.

ಒಡವೆಗಳನ್ನು ಕದಿಯುವುದಕ್ಕೋಸ್ಕರ ಬಂದವರಿಂದ ಒಡವೆಗಳನ್ನು ಹಾಕಿಕೊಂಡಿರತಕ್ಕ ಮಕ್ಕಳೂ ಸ್ತ್ರೀಯರೂ ಕೂಡ ಆಗಾಗ ಅನರ್ಥಗಳಿಗೆ ಗುರಿಯಾಗುತಿರುವರು. ಒಡವೆಗಳು ನಿತ್ಯವೂ ಧರಿಸಲ್ಪಡುವುದರಿಂದ ಕ್ರಮಕ್ರಮವಾಗಿ ಸವೆದು ತೂಕದಲ್ಲಿ ಕಡಿಮೆಯಾಗುತ್ತವೆ ಒಡವೆಗಳನ್ನು ಮಾಡಿಸುವಾಗ ಚಿನ್ನಬೆಳ್ಳಿ ಕೆಲಸಗಾರರು ಮೋಸಮಾಡುವುದು, ಅವುಗಳಿಗಾಗಿ ಕೂಲಿಯನ್ನು ಕೊಡುವುದು, ಅನಿವಾರ್ಯವಾದ ಸಂದರ್ಭಗಳಲ್ಲಿ ಅವುಗಳನ್ನು ವಿಕ್ರಯಿಸುವಾಗ ಬೆಲೆ ಕಡಿಮೆಯಾಗುವುದು, ಎರವ

ಲಾಗಿ ತಂದ ಒಡವೆಗಳು ಹೋಗಿಬಿಟ್ಟರೆ ಅವುಗಳಿಗಾಗಿ ದಂಡತೆರುವುದು- ಇವುಗಳೆಲ್ಲಾ ಅನುಭವಸಿದ್ಧವಾಗಿಯೇ ಇವೆ.

ಒಡವೆಗಳಿಗಾಗಿ ಉಪಯೋಗಿಸುವ ಧನವನ್ನು ವ್ಯವಸಾಯ ವ್ಯಾಪಾರ ಗಳಲ್ಲುಪಯೋಗಿಸಿದ್ದಾದರೆ ಅದರಿಂದ ಹಾಗೆ ಉಪಯೋಗಿಸಿದವನಿಗೆ ಪ್ರಯೋಜನವುಂಟಾಗುವುದಲ್ಲದೆ ಉತ್ಪತ್ತಿಯೂ ಹೆಚ್ಚಾಗಿ ಅನೇಕರಿಗೆ ಜೀವನಗಳುಂಟಾಗುವುವು ಒಡವೆಗಳಿಗಾಗಿ ಹಾಕುವ ದ್ರವ್ಯವನ್ನು ಸೇವಿಂಗ್ಸ್‌ಬ್ಯಾಂಕ್ ಮೊದಲಾದುವುಗಳಲ್ಲಿಟ್ಟದ್ದರೂ ಬಡ್ಡಿಬಂದು ಮೂಲ ಧನವು ಕ್ರಮಕ್ರಮವಾಗಿ ವೃದ್ಧಿಯನ್ನೈದುವುದಲ್ಲದೆ ಕಷ್ಟಕಾಲದಲ್ಲಿ ಆಪ ದ್ಧನವಾಗಿಯೂ ಪರಿಣಮಿಸುವುದು. ಈ ಭರತಖಂಡಕ್ಕೆ ೧೮೦೧ ನೇ ವರುಷದಿಂದ ೧೮೯೨ ನೇ ವರುಷದವರೆಗೆ ೪೫೦ ಕೋಟಿ ರೂಪಾಯಿ ಬೆಲೆ ಯುಳ್ಳ ಚಿನ್ನ ಬೆಳ್ಳಿಗಳು ತರಲ್ಪಟ್ಟುವು ಇವುಗಳಲ್ಲಿ ಕನಿಷ್ಠಪಕ್ಷ ೨೦೦ ಕೋಟಿ ರೂಪಾಯಿ ಬೆಲೆಯುಳ್ಳ ಚಿನ್ನ ಬೆಳ್ಳಿಗಳಾದರೂ ಒಡವೆಗಳಿಗಾಗಿ ಉಪಯೋಗಿಸಲ್ಪಟ್ಟವೆಯೆಂದು ಗೊತ್ತಾಗುತ್ತದೆ. ಅಲ್ಲಿಂದೀಚೆಗೆ ಲೆಕ್ಕ ಮಾಡಿನೋಡಿದರೆ ಇನ್ನೂ ಹೆಚ್ಚಾಗುತ್ತದೆ ಇಷ್ಟು ದ್ರವ್ಯವು ಒಡವೆಗಳಿ ಗಾಗಿ ಉಪಯೋಗಿಸಲ್ಪಡದೆ ಮೂಲಧನ ವೃದ್ಧಿಯಾಗತಕ್ಕ ವ್ಯವಸಾಯ ವ್ಯಾಪಾರ ಕೈಗಾರಿಕೆ ರೈಲು ಮೊದಲಾದುವುಗಳಿಗೆ ಉಪಯೋಗಿಸಲ್ಪಟ್ಟದ್ದರೆ ಉತ್ಪತ್ತಿ ಹೆಚ್ಚಿ ಹಣಗಾರರಿಗೆ ಲಾಭವೂ ಕೋಟ್ಯಂತರ ಜನರಿಗೆ ಜೀವನವೂ ಆಗುತ್ತಿದ್ದುವು. ನಮ್ಮದೇಶದ ಸ್ತ್ರೀಪುರುಷರಿಗೆ ಭೂಷಣಗಳಲ್ಲಿರತಕ್ಕ ಅಪೇಕ್ಷೆಯೇ ಇವರನ್ನು ಹೀನಸ್ಥಿತಿಗೆ ತರುತ್ತಲಿದೆ. ಲೋಕದಲ್ಲಿ ಜನರು ಗುಣಗಳಿಂದಲೂ ಸಚ್ಚಾರಿತ್ರಗಳಿಂದಲೂ ಭೂಷಿತರಾಗಬೇಕೇ ಹೊರತು ಒಡವೆಗಳಿಂದಲೂ ಬೆಲೆಯಾದ ವಸ್ತ್ರಗಳಿಂದಲೂ ಭೂಷಿತರಾಗುವುದಿಲ್ಲ. ಈ ವಿಷಯದಲ್ಲಿ ಪುರುಷರಂತೆ ಸ್ತ್ರೀಯರೂ ಲೋಕವ್ಯವಹಾರಜ್ಞರಾಗಿ ಉನ್ನತಸ್ಥಿತಿಗೆ ಬರಬೇಕಾದ ಪ್ರಯತ್ನಗಳನ್ನು ಮಾಡಬೇಕು.

---

## ಸಾಲ.

—

ಋಣಾದ್ಭವೇದ್ಧರ್ಮಹಾನಿಃ ಋಣಾದರ್ಥಶ್ಚ ಕ್ಷೀಯತೇ |
ತಥಾ ಕಾಮಶ್ಚ ಮೋಕ್ಷಶ್ಚ ತಸ್ಮಾನ್ನ ಋಣವಾನ್ ಭವೇತ್ ||

ಸಾಲವು ಬಹಳ ಅನರ್ಥಕಾರಿಯಾದದ್ದು. ಸಾಲಮಾಡುವಾಗ ಬಾಯಿಮಾತಿನಿಂದಾಗಲಿ ಒಡವೆ ವಸ್ತುಗಳನ್ನು ಒತ್ತೆಯಿಟ್ಟಾಗಲಿ ಗ್ರಾಮ ಭೂಮಿ ಮನೆ ಮೊದಲಾದುವುಗಳನ್ನು ಆಧಾರಮಾಡಿಯಾಗಲಿ ಸಾಲತೆಗೆದು ಕೊಳ್ಳುವುದುಂಟು. ಯಾವ ವಿಧವಾಗಿಯಾದರೂ ಸಾಲಮಾಡುವಾಗ ಗಡುವಿಗೆ ಸರಿಯಾಗಿ ಹೇಗಾದರೂ ತೀರಿಸುತ್ತೇನೆಂಬ ಉತ್ಸಾಹವು ವಿಶೇಷವಾಗಿರುವುದು. ಆದರೆ ಅದರಂತೆ ನಡೆಯುವುದಕ್ಕೆ ಅನೇಕವಾಗಿ ಅನಿವಾರ್ಯಗಳು ಪ್ರಾಪ್ತವಾಗುವುದರಿಂದ ಸಾಲತೆಗೆದುಕೊಂಡವನು ತಾನು ಆಡಿದಂತೆ ನಡೆದು ನಂಬಿಕೆಯನ್ನು ಉಳಿಸಿಕೊಳ್ಳುವುದು ಕಷ್ಟ. ವಿಶೇಷವಾಗಿ ಆಯತಿಯುಳ್ಳವರು ಸಾಲಗಾರರಾಗುವುದಿಲ್ಲವೆಂದೂ, ಬಡಬಗ್ಗರೇ ಸಾಲಗಾರರಾಗುವರೆಂದೂ ತಿಳಿಯಕೂಡದು. ತಮ್ಮ ಯೋಗ್ಯತೆಗೆ ಅನುರೂಪವಾಗಿ ನಡೆಯದೆ ಮಿತಿಮೀರಿ ವೆಚ್ಚಮಾಡುವುದಕ್ಕುಪಕ್ರಮಿಸಿದವರೆಲ್ಲರೂ ಸಾಲಮಾಡುವುದಕ್ಕೆ ಹೊರಡುವರು.

ಸಾಲಮಾಡುವುದಕ್ಕೆ ಅನೇಕ ಕಾರಣಗಳುಂಟು. ಕುಟುಂಬರಕ್ಷಣೆಗೋಸ್ಕರ ಆರ್ಜಿಸುತ್ತಿದ್ದವನು ಕಾಲಾಧೀನನಾದಾಗಲೂ ಪ್ರಬಲವಾದ ಕಷ್ಟಮುಪಪ್ರಾಪ್ತವಾದಾಗಲೂ ಸಾಲಮಾಡಬೇಕಾಗಿ ಬರುವುದು. ಇವುಗಳು ವಿಧಿಯಿಲ್ಲದೆ ಮಾಡಬೇಕಾದ ಸಾಲಗಳು. ಆದರೆ ಅನೇಕರು ಇತರರಿಗೆ ಹೊಣೆಗಾರರಾಗುವುದರಿಂದಲೂ, ಜೂಜಾಡುವುದರಿಂದಲೂ, ಅಗಮ್ಯಾಗಮನ ಅಪೇಯಪಾನಗಳನ್ನು ಮಾಡುವುದರಿಂದಲೂ, ಶುಭಾಶುಭ ಕರ್ಮಗಳಲ್ಲಿ ಮಿತಿಮೀರಿ ವ್ಯಯಮಾಡುವುದರಿಂದಲೂ ಸಾಲಗಾರರಾಗುವರು ಇವು

ಅಯುಕ್ತವಾದ ಸಾಲಗಳು. ಇನ್ನೂ ಕೆಲವರು ಗ್ರಾಮ ಭೂಮಿಗಳನ್ನು ಕೊಂಡುಕೊಳ್ಳುವುದಕ್ಕೂ ವ್ಯಾಪಾರಗಳನ್ನು ಮಾಡುವುದಕ್ಕೂ ಸಾಲಮಾಡುವರು. ಇಂಥ ಸಾಲಗಳು ಕೆಲವು ಸಂದರ್ಭಗಳಲ್ಲಿ ಲಾಭಕರವಾಗಿದ್ದರೂ ಅನೇಕವೇಳೆಗಳಲ್ಲಿ ಹೀಗೆ ಸಾಲಮಾಡುವುದೂ ಅನರ್ಥಕಾರಿಯಾಗುವುದು. ಪ್ರಾಯಶಃ ತಾನು ಕೊಂಡುಕೊಳ್ಳತಕ್ಕ ಭೂಮಿಯ ಆಯತಿಯೂ ತಾನು ಮಾಡುವ ವ್ಯಾಪಾರದಿಂದ ಬರುವ ಆದಾಯವೂ ತಾನು ಸಾಲಕ್ಕಾಗಿ ಕೊಡತಕ್ಕ ಬಡ್ಡಿಗಿಂತಲೂ ಹೆಚ್ಚಾಗಿ ಬರುವುವೆಂದು ತೋರಿದ ಹೊರತು ಸಾಲವನ್ನು ಮಾಡುವುದು ಯುಕ್ತವಲ್ಲ. ಈ ಸಂಗತಿಯನ್ನು ಗೊತ್ತುಮಾಡಿಕೊಳ್ಳದೆ ಗ್ರಾಮ ಭೂಮಿಗಳನ್ನು ಮಾಡತಕ್ಕವರಿಗೂ, ಸಾಲದ ಹಣವನ್ನು ವ್ಯಾಪಾರದಲ್ಲಿ ವಿನಿಯೋಗಿಸಿ ಇತರರಿಂದ ವ್ಯಾಪಾರ ಮಾಡಿಸುವವರಿಗೂ, ಸಾಲಮಾಡಿ ಗ್ರಾಮ ಭೂಮಿಗಳನ್ನೇ ಆಗಲಿ ವ್ಯಾಪಾರವನ್ನೇ ಆಗಲಿ ಮಾಡಿ ಅದರಲ್ಲಿ ಬಂದ ಆದಾಯವನ್ನು ಸಾಲಕ್ಕಾಗಿ ಕೊಡದೆ ಗೃಹಕೃತ್ಯಕ್ಕೋಸ್ಕರ ವಿನಿಯೋಗಿಸಿಕೊಳ್ಳುವವರಿಗೂ ನಷ್ಟ ಸಂಭವಿಸಿಯೇ ಸಂಭವಿಸುವುದು. ಆಗ ಆಯತಿಗಿಂತಲೂ ಬಡ್ಡಿಯೇ ಹೆಚ್ಚಿ ಅಸಲು ಬಡ್ಡಿಗಳನ್ನು ಕೊಡುವುದಕ್ಕೆ ಶಕ್ತಿಯಿಲ್ಲದೆ ಸಾಲಗಾರನ ಸರ್ವಸ್ವವೂ ಸಾಲಕೊಟ್ಟವನ ಪಾಲಾಗುವುದು.

ಸಂಬಳ ಮೊದಲಾದುವುಗಳುಳ್ಳ ಕೆಲವರು ಸಾಲಮಾಡಿ ಗ್ರಾಮ ಭೂಮಿ ಒಡವೆ ವಸ್ತುಗಳನ್ನು ತೆಗೆದುಕೊಂಡು ತಮ್ಮ ಆರ್ಜನೆಯಲ್ಲಿ ಸ್ವಲ್ಪಭಾಗವನ್ನು ಉಳಿಸಿ ಸಾಲ ತೀರಿಸಿಬಿಟ್ಟರೆ ಆ ಗ್ರಾಮಾದಿಗಳು ಆಪದ್ಧನವಾಗಿ ಉಳಿಯುವುವೆಂಬುದಾಗಿ ಭಾವಿಸಿ ಸಾಲಮಾಡುವರು. ಹೀಗೆ ಸಾಲಮಾಡಿ ಕೊಂಡುಕೊಂಡ ಗ್ರಾಮ ಭೂಮಿಗಳಿಂದ ಆದ ಉತ್ಪತ್ತಿಯು ಸಾಲತೀರಿಸುವುದಕ್ಕೆ ವಿನಿಯೋಗಿಸಲ್ಪಟ್ಟು ಕ್ರಮವಾಗಿ ಆಸ್ತಿ ನಿಲ್ಲುವ ಸಂದರ್ಭವುಂಟಾದಪಕ್ಷದಲ್ಲಿ ಅಂಥ ಪ್ರಯತ್ನವು ಸರಿಯಾದುದು. ಆದರೆ

ಒಡವೆ ವಸ್ತುಗಳಿಂದ ಯಾವ ಉತ್ಪತ್ತಿಯೂ ಆಗುವುದಿಲ್ಲ. ಇವಕ್ಕಾಗಿ ಮಾಡಿದ ಸಾಲವನ್ನು ತೀರಿಸುವುದಕ್ಕೆ ತಕ್ಕ ಇತರ ಆಯತಿಗಳು ಇದ್ದ ಹೊರತು ಸಾಲಮಾಡುವುದು ಸರಿಯಲ್ಲ. ಸಾಲವು ಪ್ರಾಯಶಃ ಮನುಷ್ಯನನ್ನು ಹೀನಸ್ಥಿತಿಗೆ ತರುವುದು ಸಾಲದಿಂದ ಮನುಷ್ಯನ ಗೌರವಕ್ಕೆ ನ್ಯೂನತೆಯುಂಟಾಗುವುದು. ಆದುದರಿಂದ ಪೂರ್ವಾಪರಗಳನ್ನು ಯೋಚಿಸದೆ ಸಾಲಮಾಡತಕ್ಕ ಅಭ್ಯಾಸವು ಬಹಳ ಕೆಟ್ಟದ್ದು.

ಜನರು ಸಾಲ ತೆಗೆದುಕೊಂಡಮೇಲೆ ಆ ಹಣಕ್ಕೆ ವರುಷಕ್ಕಿಷ್ಟೆಂದು ಹಣವನ್ನಾಗಲಿ ಅಥವಾ ಧಾನ್ಯವನ್ನಾಗಲಿ ಬಡ್ಡಿಗಾಗಿ ಕೊಡುವರು. ಒಡವೆ ಮೊದಲಾದುವುಗಳನ್ನು ಅಡುವಿಟ್ಟು ತೆಗೆದುಕೊಂಡ ಕೈಸಾಲಕ್ಕೆ ತಿಂಗಳಿಗೆ ರೂಪಾಯಿಗೆ ಇಷ್ಟೆಂದು ಬಡ್ಡಿಯನ್ನು ಕೊಡುವರು. ಬಡ್ಡಿಯು ನಿರಂತರದಲ್ಲೂ ಬೆಳೆಯುತ್ತಿರುವುದರಿಂದ ಬಡ್ಡಿ ಮತ್ತು ಸುಸ್ತಿಬಡ್ಡಿಗಳನ್ನು ತೆರತಕ್ಕವರು ಪ್ರಾಯಶಃ ತಲೆಯೆತ್ತುವುದು ಕಷ್ಟವಾಗಿಯೇ ಇರುವುದು. ಭರತಖಂಡದಲ್ಲಿ ಬಡ್ಡಿಗೆ ಸಾಲಕೊಡುವುದನ್ನೇ ಮುಖ್ಯ ವ್ಯಾಪಾರವಾಗಿಟ್ಟುಕೊಂಡಿರುವವರು ಬಹಳ ಜನಗಳಿರುತ್ತಾರೆ. ಇವರಲ್ಲದೆ ಬಡ್ಡಿಯ ಆಸೆಗಾಗಿ ಅಲ್ಪ ಸ್ವಲ್ಪ ದ್ರವ್ಯವಂತರಾಗಿರುವವರು ಕೂಡ ಸಾಲಕೊಟ್ಟು ಬಡ್ಡಿಯನ್ನು ತೆಗದುಕೊಳ್ಳುವ ವ್ಯಾಪಾರವನ್ನು ಇಟ್ಟುಕೊಂಡಿದ್ದಾರೆ. ಈ ವಿಥವಾದ ವ್ಯಾಪಾರದಲ್ಲಿ ವಸೂಲಾಗುವ ಬಡ್ಡೀಹಣವು ಅನೇಕಕೋಟಿ ರೂಪಾಯಿಗಳಾಗಿರುತ್ತವೆ. ಜನರು ಹೀಗೆ ಬಡ್ಡಿಯನ್ನು ತೆರುತ್ತಿರುವುದರಲ್ಲಿ ಧನದ್ವಿಗುಣವಾಗಿಯೂ ಧನತ್ರಿಗುಣವಾಗಿಯೂ ಇರುವುದಕ್ಕೆ ಕೋರ್ಟುಗಳಲ್ಲಿ ಎಷ್ಟೋ ದೃಷ್ಟಾಂತಗಳಿವೆ. ಅನೇಕರು ತಮ್ಮ ತಾಪತ್ರಯಗಳಿಂದ ತಾವು ಮಾಡಿದ ಸಾಲದ ಗಡುವಿಗೆ ಸರಿಯಾಗಿ ಬಡ್ಡಿಯನ್ನು ಕೊಡಲಾರದೆ ಬಹಳವಾಗಿ ಬಡ್ಡಿ ಬೆಳೆದಾಗ ಈಡುಮಾಡಿಗ ಗ್ರಾಮ ಭೂಮಿ ಮನೆ ಒಡವೆ ಮೊದಲಾದುವುಗಳನ್ನು ಅನತ ಮಾಲುಮಾಡುವರು. ಒಂದೊಂದುವೇಳೆ ಈಡು

ಮಾಡಿದ್ದು ಸಾಲದೆ ಅವುಗಳ ಜತೆಗೆ ಇತರ ಆಸ್ತಿಗಳನ್ನೂ ಸಾಲಕೊಟ್ಟ ವನ ಪಾಲುಮಾಡುವರು. ಆದರೆ ಬಡ್ಡಿಗೆ ಸಾಲತೆಗೆದುಕೊಳ್ಳುವಾಗ ಗಡು ವಿಗೆ ಸರಿಯಾಗಿ ಅಸಲನ್ನೂ ಬಡ್ಡಿಯನ್ನೂ ಹೇಗಾದರೂ ಕೊಟ್ಟು ತೀರಿಸು ತ್ತೇನೆಂಬ ಉತ್ಸಾಹವು ವಿಶೇಷವಾಗಿರುವುದು. ಇದರಂತೆ ನಡೆಯಲು ಯಾರೊ ಕೆಲವರಿಗೆ ಸಾಧ್ಯವೇ ವಿನಾ ಎಲ್ಲರಿಗೂ ಸಾಧ್ಯವಾಗುವುದಿಲ್ಲ. ಅವರು ಸೇರಿ ಸುವ ದ್ರವ್ಯವೆಲ್ಲ ಆಗಾಗ್ಗೆ ಸಂಸಾರದಲ್ಲಿ ಪ್ರಾಪ್ತವಾಗುವ ಅನಿವಾರ್ಯಗಳಿಗೆ ವ್ಯಯವಾಗುವುದರಿಂದ ಇಂಥವರಿಗೆ ಧನದ್ವಿಗುಣ ತ್ರಿಗುಣಗಳನ್ನು ತೆರತಕ್ಕ ತೊಂದರೆಯು ತಪ್ಪುವುದಿಲ್ಲ. ಬಡ್ಡಿಗೆ ಸಾಲತೆಗೆಯತಕ್ಕಂಥ ಕುಟುಂಬಿ ಗಳು ಹೊಟ್ಟೆ ಬಟ್ಟೆಗಳನ್ನಾದರೂ ಕಟ್ಟಿ ಸರ್ವಪ್ರಯತ್ನದಲ್ಲೂ ಋಣವಿಮು ಕ್ತರಾಗತಕ್ಕ ಪ್ರಯತ್ನಗಳನ್ನು ಮಾಡುವುದು ಅತ್ಯಾವಶ್ಯಕವಾದುದು.

## ಅಪ್ರಾಮಾಣಿಕತೆ.

ವಿಸ್ರಂಭಾದಿಹ ಸಕಲಾಃ ಸಿದ್ಧೀಃ ಸಂಪ್ರಾಪ್ನುತೇ ಮನುಜಃ |
ತದಭಾವೇಖಿಲಹಾನಿಂ ತಸ್ಮಾದ್ವಿಸ್ರಂಭಣೀಯಃ ಸ್ಯಾತ್ ||

ನ್ಯಾಯ್ಯವಾದ ಮಾರ್ಗಗಳನ್ನುಲಂಘಿಸಿ ನಡೆಯತಕ್ಕ ನಡೆವಳಿಕೆಯು ಅಪ್ರಾಮಾಣಿಕತೆ ಎಂಬುದಾಗ ಎನ್ನಿಸಿಕೊಳ್ಳುವುದು. ಇದು ಅಧಿಕಾರ ವ್ಯಾಪಾರ ಲೇವಾದೇವಿ ಮೊದಲಾದ ಎಲ್ಲಾ ನಡೆವಳಿಕೆಗಳಲ್ಲಿಯೂ ಇರಬೇ ಕಾದುದು ಸಾಲತೆಗೆದುಕೊಂಡವನಿಗೆ ತನ್ನ ಆದಾಯವು ಕಡಿಮೆಯಾದಾಗ ಸಾಲಕೊಟ್ಟವನ ಬಾಧೆಯು ಹೆಚ್ಚಾಗುವುದು. ಅವನು ಸಾಲಕೊಟ್ಟವನ ತೊಂದರೆಗಳನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ನ್ಯಾಯವಾದ ನಡೆವಳಿಕೆ ಗಳನ್ನು ಬಿಟ್ಟು ವಂಚಿಸುವುದಕ್ಕೆ ಯತ್ನಿಸುವನು. ಸರ್ಕಾರ ಸಾಹುಕಾರೀ ಹಣಗಳನ್ನು ಸ್ವಾಧೀನದಲ್ಲಿಟ್ಟುಕೊಂಡಿರುವವರು ಅದರಲ್ಲಿ ತಮ್ಮ ಸಾಲಕ್ಕೂ ಗೃಹಕೃತ್ಯಕ್ಕೂ ಬೇಕಾದಷ್ಟನ್ನುಪಯೋಗಿಸಿಕೊಳ್ಳುವುದೂ

ಉಂಟು. ಹೀಗೆ ಉಪಯೋಗಿಸಿಕೊಂಡ ದ್ರವ್ಯವನ್ನು ಮತ್ತೆ ಸೇರಿಸುವು ದಕ್ಕೆ ಕೈಲಾಗದೆಯೋ ದುರಾಶೆಯಿಂದಲೋ ಸುಳ್ಳುಲೆಕ್ಕಗಳನ್ನು ಬರೆದಾಗಲಿ ಅಥವಾ ಲೆಕ್ಕಗಳನ್ನು ತಿದ್ದಿಯಾಗಲಿ ಆಗಿನ ತೊಂದರೆಯನ್ನು ನಿವಾರಣೆ ಮಾಡಿಕೊಳ್ಳುವರು. ಈ ಕೆಲಸಗಳು ಬೈಲಿಗೆ ಬಂದಮೇಲೆ ಅವರಿಗೆ ಅಪ ಮಾನವಾಗುವುದಲ್ಲದೆ ಜೀವನೋಪಾಯಗಳೂ ತಪ್ಪಿ ಶಿಕ್ಷೆಯನ್ನೂ ಅನು ಭವಿಸಬೇಕಾಗುವುದು. ಬಂದೀಖಾನೆಗಳಲ್ಲಿ ಹೀಗೆ ಶಿಕ್ಷೆಗಳನ್ನು ಅನುಭವಿ ಸುತ್ತ ಜೀವನೋಪಾಯಗಳನ್ನು ಕಳೆದುಕೊಂಡಿರುವವರ ನಿಜಸ್ಥಿತಿಗಳನ್ನು ವಿಚಾರಮಾಡಿದರೆ ಅಪ್ರಾಮಾಣಿಕತೆಯಿಂದ ಉಂಟಾಗತಕ್ಕ ಅನರ್ಥಗಳು ವ್ಯಕ್ತವಾಗುತ್ತವೆ. ಆದುದರಿಂದ ಎಂದಿಗೂ ಅಪ್ರಾಮಾಣಿಕರಾಗದೆ ಇರು ವುದು ಶ್ರೇಯಸ್ಕರವಾದುದು.

## ಅ ಪ ಮಾ ನ .

ಪ್ರಾಣಂ ವಾಪಿ ಪರಿತ್ಯಜ್ಯ ಮಾನಮೇವಾಭಿರಕ್ಷಯೇತ್ |
ಅನಿತ್ಯೋ ಭವತಿ ಪ್ರಾಣೋ ಮಾನಶ್ಚಂದ್ರತಾರಕಂ ||

ಮಾನಹಾನಿಯೇ ಅಪಮಾನವೆನ್ನಿಸಿಕೊಳ್ಳುವುದು. ದ್ಯೂತ ಪಾನ ವ್ಯಭಿಚಾರ ಮೊದಲಾದುವುಗಳನ್ನು ಮಾಡತಕ್ಕವರೂ, ಅಪ್ರಾಮಾಣಿಕತೆ ಯಿಂದ ನಡೆಯುವವರೂ ಮಾನಿಷ್ಠರಾಗಿ ಇರುವುದೇ ಅಪೂರ್ವ. ಸಾಲಗಾ ರನು ತಾನು ಮಾಡಿಕೊಂಡ ಒಡಂಬಡಿಕೆಯ ಪ್ರಕಾರ ನಡೆಯುವುದಕ್ಕೆ ಆಗ ದಿರುವ ಸಂದರ್ಭಗಳಲ್ಲಿ ಅಪಮಾನವನ್ನು ಹೊಂದುವುದುಂಟು. ಅಂಥ ಸಂದ ರ್ಭಗಳಲ್ಲಿ ಅವನು ಒಂದು ಹೊಸದಾದ ವಾಯಿದೆಯ(ಗಡುವು)ನ್ನು ಮಾಡಿ ಕೊಳ್ಳುವನು. ಕಡೆಗೆ ತನ್ನ ಪ್ರಯತ್ನಗಳೆಲ್ಲ ನಿಷ್ಫಲವಾದಾಗ ತಾನು ಮನೆ ಯಲ್ಲಿದ್ದರೂ ಇಲ್ಲವೆಂದು ಹೇಳಿಸಿಕೊಳ್ಳುವುದಲ್ಲದೆ ಸಾಲಕೊಟ್ಟವನು ವಾಸಮಾಡುವ ಬೀದಿಯಲ್ಲಿ ತಿರುಗುವುದನ್ನೂ ಬಿಡುವನು; ಕೊನೆಗೆ ಅವನ

ಬಾಧೆಯನ್ನು ತಪ್ಪಿಸಿಕೊಳ್ಳುವುದಕ್ಕೋಸ್ಕರ ದೇಶಾಂತರಕ್ಕೆ ಹೋಗುವುದೂ ಉಂಟು. ಆಮೇಲಲೂ ಸಿಕ್ಕಿಕೊಂಡರೆ ಸಾಲಕೊಟ್ಟವನಿಂದ ನಾನಾವಿಧವಾದ ಅಪಮಾನಗಳನ್ನು ಹೊಂದಿ ಬಹಳವಾಗಿ ನೊಂದುಕೊಂಡು ಸಿವಿಲ್‌ಸಂಬಂಧವಾದ ಬಂದೀಖಾನೆಗೆ ಹೋಗುವನು; ಅಥವಾ ದಿವಾಳಿಯಾದರೂ ಆಗುವನು. ಆದುದರಿಂದ ಮಾನಹೋಗತಕ್ಕ ಕೆಲಸಗಳನ್ನು ಮಾಡುವುದಕ್ಕೆ ಮೊದಲೇ ಚೆನ್ನಾಗಿ ಯೋಚಿಸಿ ಮಾನಹಾನಿಗೆ ಗುರಿಯಾಗದಂತೆ ನಡೆದುಕೊಳ್ಳುವುದು ಕರ್ತವ್ಯವಾದುದು.

## ನಗದುವ್ಯಾಪಾರ.

ದದ್ಯಾನ್ಮೂಲ್ಯಂ ಸದ್ಯಏವ ಕ್ರಯವಿಕ್ರಯಯೋರಿಹ |
ಅನ್ಯಥಾ ಲಾಭಹಾನಿಃ ಸ್ಯಾತ್ ಇತಿ ನೀತಿವಿದೋ ವಿದುಃ ||

ಪದಾರ್ಥಗಳನ್ನು ತೆಗೆದುಕೊಳ್ಳುವಾಗ ಕೈಮೇಲೆ ಹಣಕೊಟ್ಟು ತೆಗೆದುಕೊಳ್ಳುವುದಕ್ಕೆ ನಗದುವ್ಯಾಪಾರವೆಂದು ಹೆಸರು. ಹೀಗೆ ಕೊಂಡುಕೊಳ್ಳುವ ರೂಢಿಯೇ ಒಳ್ಳೆಯದು. ಸಾಲವಾಗಿ ಪದಾರ್ಥಗಳನ್ನು ಕೊಂಡುಕೊಳ್ಳುವ ಅಭ್ಯಾಸವು ಬಹಳ ನಷ್ಟವನ್ನುಂಟುಮಾಡುತ್ತದೆ. ಕೈಮೇಲೆ ಹಣ ಕೊಟ್ಟು ವ್ಯಾಪಾರಮಾಡುವಾಗ ವರ್ತಕರು ಸ್ವಲ್ಪವೇ ಲಾಭವಿಟ್ಟುಕೊಂಡು ಪದಾರ್ಥಗಳನ್ನು ಕೊಡುವರು. ಹೀಗೆ ತರುವಾಗ ಒಂದು ಅಂಗಡಿಯಲ್ಲದಿದ್ದರೆ ಮತ್ತೊಂದು ಅಂಗಡಿಯಲ್ಲಿ ನೋಡಿ ಒಳ್ಳೇಪದಾರ್ಥಗಳನ್ನು ತರಬಹುದು. ಸಾಲವಾಗಿ ತರುವುದಕ್ಕುಪಕ್ರಮಿಸಿದರೆ ವ್ಯಾಪಾರಗಾರನು ಹೆಚ್ಚಾದ ಲಾಭವನ್ನಿಡುವುದಲ್ಲದೆ ಕೆಟ್ಟ ಪದಾರ್ಥಗಳನ್ನೂ ಕೊಡುವುದುಂಟು. ಹೀಗೆ ಸಾಲಕೊಡುವವನು ಒಳ್ಳೇಪದಾರ್ಥಗಳನ್ನು ಕೊಡುವುದಿಲ್ಲವೆಂದೂ ಹೆಚ್ಚುಧಾರಣೆಯಿಂದ ಕೊಡುತ್ತಾನೆಂದೂ ತಿಳಿದಿದ್ದರೂ ತಾನು ಅವನಿಗೆ ಕೊಡತಕ್ಕ ಹಣವನ್ನು ಕೊಟ್ಟು ಬೇರೆ ಅಂಗಡಿಯಲ್ಲಿ ನಗ

ದಾಗಿ ತರುವುದಕ್ಕೆ ಅನುಕೂಲ್ಯವಿಲ್ಲದಿರುವುದರಿಂದ ಅವನು ಕೊಟ್ಟುದನ್ನೇ ತರಬೇಕಾಗುವುದು. ಈ ರೀತಿಯಾಗಿ ಸಾಲತರುವುದರಿಂದ ಎರಡುವಿಧವಾದ ನಷ್ಟಗಳು ಸಂಭವಿಸುವುವು. ಆದುದರಿಂದ ಈ ವಾಡಿಕೆಯನ್ನು ಸಾಧ್ಯವಾದನುಟ್ಟಿಗೂ ಬಿಡುತ್ತಬರುವುದೇ ಉತ್ತಮವು.

## ಹರಾಜಿಗೂ ಷಾಪಿಗೂ ಹೋಗಬಾರದು.

ನ ಕದಾಪಿಚ ಗೃಹ್ಣೀಯಾತ್ ವಸ್ತ್ವನಾವಶ್ಯಕಂ ನರಃ |
ಅನ್ಯಥಾ ಧನಹಾನಿಃ ಸ್ಯಾತ್ ದಾರಿದ್ರ್ಯಂ ಚಾಪಿ ಶಾಶ್ವತಂ ||

ಚಿಲ್ಲರೆಸಾಮಾನುಗಳನ್ನೂ ಬಟ್ಟೆಗಳನ್ನೂ ಹರಾಜುಹಾಕುವ ಸ್ಥಳಗಳಿಗೂ ಷಾಪುಗಳಿಗೂ ವ್ಯಾಪಾರಸ್ಥರಲ್ಲದ ಜನರು ಆವಶ್ಯಕವಾದ ಕೆಲಸವಿದ್ದಾಗ ಹೊರತು ಇತರ ಕಾಲಗಳಲ್ಲಿ ಹೋಗಬಾರದು. ಹರಾಜುಹಾಕುವ ಸ್ಥಳಗಳಲ್ಲಿ ಪ್ರಾಯಶಃ ಥಳಕುಮಾಡಿದ ಹಳೇಸಾಮಾನುಗಳೂ ನುಸಿಹಿಡಿದ ಅಥವಾ ಬಣ್ಣಹಾಕಲ್ಪಟ್ಟ ಹಳೇಬಟ್ಟೆಗಳೂ ಹರಾಜುಹಾಕಲ್ಪಡುವುವು. ಹರಾಜಿನಲ್ಲಿ ಕೊಂಡುಕೊಳ್ಳುವವನು ಒಂದುಸಲ ಲಾಭಪಡೆದರೂ ಮತ್ತೊಂದುಸಲವಾದರೂ ಮೋಸಹೋಗುವನು. ಇದಲ್ಲದೆ ಹರಾಜುಹಾಕತಕ್ಕವರು ತಮ್ಮ ಕಡೆಯಾಗಿ ಛಡದರಖಾಸ್ತುಮಾಡುವುದಕ್ಕೆ ಏಕಾಂತವಾಗಿ ಜನರನ್ನು ಏರ್ಪಾಡುಮಾಡಿಕೊಂಡು ಹರಾಜುಹಾಕುವ ಪದಾರ್ಥದ ಬೆಲೆಯು ಹೆಚ್ಚಾಗುವಂತೆ ಮಾಡಿ, ತಮಗೆ ಲಾಭಬರುವಂತೆ ದರಖಾಸ್ತುಮಾಡಿದವನ ಬೀಟಿಗೆ ಬಿಡುವರು. ಹರಾಜಿನಲ್ಲಿ ಬೀಟುಮಾಡತಕ್ಕವರು ಅವರು ಮಾಡಿಕೊಂಡಿರುವ ಏರ್ಪಾಡುಗಳಿಂದ ತಮಗೆ ನಷ್ಟವಾಗದಿರುವಂತೆ ನೋಡಿಕೊಂಡು ದರಖಾಸ್ತುಮಾಡಬೇಕು.

ಷಾಪುಗಳಲ್ಲಿ ದೇಶದೇಶಗಳಿಂದ ಬಂದಿರುವ ವಿಚಿತ್ರವಾದ ಸಾಮಾನುಗಳು ನೋಡುವವರ ಮನಸ್ಸನ್ನು ಆಕರ್ಷಿಸುತ್ತವೆ. ಷಾಪಿಗೆ ಹೋದವರು

ಆ ಸಾಮಾನುಗಳನ್ನು ನೋಡಿ ಭ್ರಮಿಸಿ 'ಈದಿನ ಇದನ್ನು ತೆಗೆದುಕೊಂಡು ಸುಖಪಟ್ಟದ್ದೇ ಬಂತು' ಎಂದು ಅನಾವಶ್ಯಕವಾದ ಪದಾರ್ಥಗಳನ್ನು ಕೊಂಡುಕೊಳ್ಳುವುದಕ್ಕೆ ಯತ್ನಿಸುವರು. ಅಂಥ ಪದಾರ್ಥವು ಇಲ್ಲದಿದ್ದರೆ ಆಗುವುದಿಲ್ಲವೇ ಎಂಬುದನ್ನುಕೂಡ ಆಲೋಚಿಸುವುದಿಲ್ಲ. ಯಾವುದನ್ನು ಕೊಂಡುಕೊಳ್ಳಬೇಕಾದರೂ ಅದಿಲ್ಲದಿದ್ದರೆ ಮನೆಯಲ್ಲಿರುವುವುಗಳಿಂದಲೇ ಆಗಿನ ಕೆಲಸ ನಡೆಯುವುದಿಲ್ಲವೆ? ಖಂಡಿತವಾಗಿ ಆಗಲೇಬೇಕೆ? ಎಂಬುದನ್ನು ಮರೆಯದೆ ಹೋಚಿಸಿ ತಿಳಿದುಕೊಳ್ಳುವವರು ಅಪೂರ್ವ. ಜನರು ಪೂರ್ವಾಪರಗಳನ್ನು ಯೋಜಿಸದೆ ಹರಾಜಿಗೂ ಷಾಪುಗಳಿಗೂ ಹೋಗಿ ಅನಾವಶ್ಯಕವಾದ ಪದಾರ್ಥಗಳನ್ನು ಕೊಂಡುಕೊಂಡು ಅವಶ್ಯಕವಾದುದಕ್ಕೆ ಕೈಯಲ್ಲಿ ದುಡ್ಡಿಲ್ಲದೆಹೋದಾಗ ಕ್ಲೇಶಪಡುವರು. ಆದುದರಿಂದ ಅವಶ್ಯಕವಾದ ಕೆಲಸವಿದ್ದ ವೇಳೆಗಳಲ್ಲಿ ಹೊರತು ಬಾರಿಬಾರಿಗೂ ಹರಾಜಿಗೂ ಷಾಪಿಗೂ ಹೋಗುತಿರಬಾರದು.

## ಜೀತ.

ಸೇವಾ ಶ್ವವೃತ್ತಿರಾಖ್ಯಾತಾ ತತಸ್ತಾಂ ಪರಿವರ್ಜಯೇತ್ |
ಯಯಾಕಯಾಪ್ಯಪರಯಾ ವೃತ್ತ್ಯಾ ಜೀವೇತ್ ಸದಾ ಸುಧೀಃ ||

ಸಾಲತೆಗೆದುಕೊಂಡ ರೈತಾಪಿಜನರು ಸಾಲವನ್ನು ತೀರಿಸುವವರೆಗೂ ತಾವಾಗಲಿ ತಮ್ಮ ಕುಟುಂಬದವರಾಗಲಿ ಅಥವಾ ಎಲ್ಲರೂ ಆಗಲಿ ಸಾಲ ಕೊಟ್ಟವನ ಬಳಿಯಲ್ಲಿದ್ದುಕೊಂಡು ವ್ಯವಸಾಯಮೊದಲಾದುವುಗಳನ್ನು ಮಾಡಿಕೊಂಡಿರುವರು. ಇಂಥವರು ಜೀತಗಾರರೆಂಬುದಾಗಿ ಎನ್ನಿಸಿಕೊಳ್ಳುವರು. ಇವರು ಯಜಮಾನನ ಭೂಮಿಯನ್ನು ಉತ್ತು ವ್ಯವಸಾಯಮಾಡಿ ಅಲ್ಲಿ ಇರುವಾರ ಆದ ದವಸ ಮೊದಲಾದುವುಗಳನ್ನೆಲ್ಲಾ ಅವನಿಗೊಪ್ಪಿಸಿ ತಾವು ಜೀವನಕ್ಕಾಗಿ ಕ್ಲೃಪ್ತಮಾಡಿಕೊಂಡಿರುವ ದವಸ ಸಂಬಳ ಮೊದ

ಲಾದುವುಗಳನ್ನು ಮಾತ್ರ ತೆಗೆದುಕೊಂಡು ಜೀವಿಸುವರು. ತಮ್ಮ ಜೀವನ ಕ್ಕಾಗಿ ಕ್ಲುಪ್ತಮಾಡಿಕೊಂಡದ್ದು ಸಾಲದೆಹೋದರೆ ಮತ್ತೆ ಅವರ ಬಳಿಯ ಲ್ಲಿಯೇ ಸಾಲತೆಗೆದುಕೊಂಡು ಗೃಹಕೃತ್ಯಗಳನ್ನು ಮಾಡಿಕೊಳ್ಳುತ್ತಾ ಬರುವರು. ಈ ಜೀತಗಾರರು ಒಬ್ಬರ ಬಳಿಯಲ್ಲಿ ಸೇರಿದರೆ ಸಾಲತೀರಿ ಸಿಕೊಂಡು ಬಿಡುಗಡೆಯಾಗುವುದಕ್ಕೇ ಅವಕಾಶವಿಲ್ಲದೆ ವಂಶಪರಂಪರೆ ಯಾಗಿ ಸೇವಕ ವೃತ್ತಿಯಲ್ಲಿಯೇ ಇರಬೇಕಾಗುವುದು. ಇವರು ಬಿಡುಗಡೆ ಯಾಗಬೇಕಾದರೆ ತಮಗೆ ಯಜಮಾನನಿಂದ ಬರತಕ್ಕ ಸಂಬಳ ದವಸ ಮೊದ ಲಾದುವುಗಳಲ್ಲಿ ಮಿತವ್ಯಯ ಮಾಡಿಕೊಂಡು ಉಳಿದುದನ್ನು ಸಾಲಕ್ಕಾಗಿ ವಿನಿಯೋಗಿಸುತ್ತ ಬರಬೇಕು.

ಆದರೆ ಹೀಗೆ ಮಾಡಿ ಜೀತದಿಂದ ಬಿಡುಗಡೆಯನ್ನು ಹೊಂದುವವರೇ ಅಪೂರ್ವ; ಕ್ಲುಪ್ತವಾಗಿ ಬರುವುದನ್ನೆಲ್ಲಾ ವೆಚ್ಚಮಾಡಿಕೊಂಡು ಇನ್ನೂ ಹೆಚ್ಚಾಗಿ ಯಜಮಾನನ ಹತ್ತಿರ ಸಾಲಮಾಡಿ ಜೀತದಿಂದ ವಿಮುಕ್ತರಾಗು ವುದಕ್ಕೆ ಅವಕಾಶವಿಲ್ಲದಂತೆ ಮಾಡಿಕೊಳ್ಳುವವರೇ ವಿಶೇಷವಾಗಿರುವರು. ಯಜಮಾನನ ಅಥವಾ ಅವನಕಡೆಯವರ ಹಿಂಸೆಯು ಹೆಚ್ಚಾಗಿ ಕಿರಿಕಿರಿಯು ಬಹಳವಾಗಿ ಅವರಬಳಿಯಲ್ಲಿ ಜೀತಮಾಡುವುದು ಬಹುಕಷ್ಟವೆಂದು ತೋರಿದ ಪಕ್ಷದಲ್ಲಿ, ಜೀತಗಾರರಾದವರು ಮತ್ತೊಬ್ಬನಲ್ಲಿ ಜೀತಕ್ಕೆ ಒಪ್ಪಿಕೊಂಡು ಸಾಲವನ್ನು ತೆಗೆದು ಮೊದಲಿನ ಯಜಮಾನನಿಗೆ ಕೊಟ್ಟು ಅವನ ಹತ್ತಿರ ಜೀತದಿಂದ ವಿಮುಕ್ತರಾಗುವುದುಂಟು. ಈ ಜೀತವು ಬಹುಕಷ್ಟತರವಾದ ವೃತ್ತಿಯು. ಜೀತಗಾರರು "ನಾವು ದುಡಿದು ಸಂಪಾದಿಸಿದುದೆಲ್ಲಾ ಯಜ ಮಾನನಿಗೆ ಸೇರುತ್ತದೆ, ನಮಗೆ ಕ್ಲುಪ್ತವಾದುದಕ್ಕಿಂತ ಹೆಚ್ಚಾಗಿ ಬರುವು ದಿಲ್ಲ, ನಾವೇಕೆ ಕಷ್ಟಪಡಬೇಕು?" ಎಂಬುದಾಗಿ ಕೆಲಸಗಳಲ್ಲಿ ಉದಾಸೀನ ರಾಗುವರು. ಈ ಔದಾಸೀನ್ಯದಿಂದ ಯಜಮಾನನಿಗೆ ಪ್ರಯೋಜನವು ಕಡಿಮೆ ಯಾಗುವುದಲ್ಲದೆ, ದೇಶದ ಉತ್ಪತ್ತಿಯೂ ಕಡಿಮೆಯಾಗುವುದು. ಆದುದ

ರಿಂದ ಯಜಮಾನನು ತನ್ನ ಜೀತಗಾರರಿಗೆ ಕ್ಲೃಪ್ತವಾಗಿ ಕೊಡತಕ್ಕ ಪಡಿ ಸಂಬಳಗಳಲ್ಲದೆ ಅವರ ಕಷ್ಟದಿಂದ ತಮಗೆ ಲಾಭವು ಹೆಚ್ಚಾಗಿ ಉಂಟಾದಾಗ ಅವರ ಕಷ್ಟಕ್ಕೆ ತಕ್ಕಷ್ಟು ಹೆಚ್ಚು ಪ್ರಯೋಜನವನ್ನೂ ಅವರಿಗೆ ತೋರಿಸಿದಹೊರತು ಜೀತವು ಲಾಭಕರವಾಗುವುದಿಲ್ಲ. ಇಂತಹ ತೊಂದರೆಗಳನ್ನೆಲ್ಲ ಅನುಭವಿಸುವುದಕ್ಕಿಂತ ಜನರು ಈ ಹಾಳುಜೀತಗಾರ ಪದ್ಧತಿಯನ್ನೇ ತಪ್ಪಿಸುವುದು ಉತ್ತಮವು.

## ಋಣಪರಿಹಾರ.

ಋಣಪರಿಹರಣಾದನ್ಯತ್ ನ ಹಿ ಕಷ್ಟತರಂ ಭವೇಲ್ಲೋಕೇ |
ಅತಏವ ಬುದ್ಧಿಮನ್ತೋ ನ ಋಣಂ ಕುರ್ಯುಃ ಕದಾಚಿದಪಿ ||

ಮಾಡಿದ ಸಾಲವನ್ನು ತೀರಿಸುವುದಕ್ಕೆ ಋಣಪರಿಹಾರವೆಂಬುದಾಗಿ ಹೆಸರು. ಎಂತಹ ದೊಡ್ಡ ಕಲ್ಲನ್ನಾದರೂ ಬೆಟ್ಟದಿಂದ ಕೆಳಕ್ಕೆ ಉರುಳಿಸುವುದು ಬಹಳ ಸುಲಭವು; ಕೆಳಕ್ಕೆ ಉರುಳಿಸಲ್ಪಟ್ಟ ಕಲ್ಲನ್ನು ಬೆಟ್ಟದ ಮೇಲಕ್ಕೆ ತೆಗೆದುಕೊಂಡು ಹೋಗುವುದು ಕಷ್ಟವು. ಸಾಲಮಾಡುವುದು ಸುಲಭವು; ಮಾಡಿದ ಸಾಲವನ್ನು ತೀರಿಸಿ ಋಣವಿಮುಕ್ತನಾಗುವುದು ಬಹಳ ಶ್ರಮವು. ಹೀಗಿದ್ದರೂ, ಬುದ್ಧಿವಂತನು ಋಣವಿಮುಕ್ತನಾಗುವುದು ಅಸಾಧ್ಯವಲ್ಲ. ಕೆಲವು ನಿಯಮಗಳನ್ನು ತಪ್ಪದೆ ಅನುಸರಿಸಿದಲ್ಲಿ ಋಣವಿಮುಕ್ತನಾಗಬಹುದು. ಮೊದಲು ನಮ್ಮ ಆಯತಿಯನ್ನೂ ಸಾಲವನ್ನೂ ಗೊತ್ತುಮಾಡಿಕೊಳ್ಳಬೇಕು. ಆದಾಯವನ್ನು ಗೊತ್ತುಮಾಡುವುದರಲ್ಲಿ ನಿಯತವಾಗಿ ನಮಗೆ ಬರುವುದಕ್ಕಿಂತ ಹೆಚ್ಚಾದ ಅಂದಾಜನ್ನು ಕಟ್ಟಬಾರದು. ಗೊತ್ತಾಗಿ ಬರುವ ಆದಾಯದಲ್ಲಿ ಗೃಹಕೃತ್ಯದ ವ್ಯಯಗಳಿಗೆ ಇಷ್ಟೆಂದೂ ಸಾಲಗಳಿಗಾಗಿ ಕೊಡುವುದಕ್ಕೆ ಇಷ್ಟೆಂದೂ ನಿಷ್ಕರ್ಷೆಮಾಡಿಕೊಂಡು ಸಾಲ

ವನ್ನು ಪ್ರತಿತಿಂಗಳಲ್ಲಿಯೂ ನಿಯತವಾಗಿ ತೀರಿಸುತ್ತ ಬರಬೇಕು. ಹೀಗೆ ಮಾಡಿಕೊಳ್ಳದಿದ್ದರೆ ಋಣವಿಮುಕ್ತನಾಗುವುದಕ್ಕೆ ಅವಕಾಶವಾಗುವುದಿಲ್ಲ. ಅಸಲಿಗೆ ಸ್ವಲ್ಪವನ್ನೂ ಕೊಡದೆ ಬಡ್ಡಿಯನ್ನು ಮಾತ್ರ ಕೊಡುವವರೂ ಉಂಟು. ಇಂಥವರು ಋಣವಿಮುಕ್ತರಾಗುವುದೇ ಅಪೂರ್ವ. ಇವರು ಕೊಡತಕ್ಕ ಬಡ್ಡಿಯು ಅಸಲಿಗಿಂತಲೂ ಬಹಳ ಹೆಚ್ಚಾಗುವುದು. ಸಾಲ ತೆಗೆದುಕೊಂಡವನು ತನ್ನ ಆರ್ಜನೆಯಲ್ಲೊಂದುಭಾಗವನ್ನು ಬಡ್ಡಿಗೂ ಸಾಧ್ಯವಾದಮಟ್ಟಿಗೆ ಅಸಲಿಗೂ ಕೊಡುತ್ತ ಬಂದಲ್ಲಿ ಕ್ರಮಕ್ರಮವಾಗಿ ಸಾಲತೀರುವುದಕ್ಕೆ ಅವಕಾಶವಾಗುವುದು. ಹೀಗೆ ಮಾಡದೆ ಬಂದ ಆದಾಯ ವನ್ನು ಪೂರ್ವಾಪರಯೋಚನೆಗಳಿಲ್ಲದೆ ವೆಚ್ಚಮಾಡುತ್ತ ಸಾಲ ತೀರಿಸುವು ದಕ್ಕೆ ಯಾವುದೋ ಬಂದು ಆದಾಯವನ್ನು ನಿರೀಕ್ಷಿಸಿಕೊಂಡು ಕಾಲಹರಣ ಮಾಡುತ್ತಿದ್ದರೆ, ಬಡ್ಡಿಯು ಹೆಚ್ಚಿ ಅದನ್ನು ಒಟ್ಟಿಗೆ ಕೊಡುವುದಕ್ಕೆ ಆಗದೆ ಅಸಲು ಬಡ್ಡಿಗಳನ್ನು ಸೇರಿಸಿ ಪತ್ರಬರೆದುಕೊಟ್ಟು ಅನೇಕ ತೊಂದರೆಗಳಿಗೆ ಗುರಿಯಾಗಬೇಕಾಗುವುದು.

ಋಣಪರಿಹಾರವಾಗುವುದಕ್ಕೋಸ್ಕರ ಚೆನ್ನಾಗಿ ಯೋಚಿಸಿ ತನ್ನ ಅನ್ನವಸ್ತ್ರಗಳಿಗೆ ಅತ್ಯಾವಶ್ಯಕವಾಗಿ ಬೇಕಾದಷ್ಟನ್ನು ಗೊತ್ತುಮಾಡಿಕೊಂಡು ಉಳಿದುದನ್ನು ಸಾಲಕ್ಕಾಗಿ ಕೊಡುತ್ತ ಬರಬೇಕು. ಹೀಗೆ ಮಾಡುವುದರಿಂದ ಸಾಲತೀರುವುದಕ್ಕೆ ಅವಕಾಶವಾಗುವುದು ತನ್ನ ಆಯತಿಗೆ ಮೀರದೆ ಸಾಲ ಮಾಡಿರತಕ್ಕ ಒಬ್ಬನಿಗೆ ತಿಂಗಳಿಗೆ ೧೦ ರೂಪಾಯಿ ವರಮಾನವೂ ೧೦೦ ರೂಪಾಯಿ ಸಾಲವೂ ಇದ್ದರೆ ಅವನು ತಿಂಗಳಿಗೆ ಬಡ್ಡಿಗಾಗಿ ೧ ರೂಪಾಯಿ ಯನ್ನೂ ಸಾಲಕ್ಕಾಗಿ ೧ ರೂಪಾಯಿಯನ್ನೂ ಕೊಡುತ್ತ ಬಂದರೂ ೭ ವರುಷಗಳೊಳಗಾಗಿ ಅಸಲು ಬಡ್ಡಿ ಸಹ ತೀರಿ ಹೋಗುವುವು.

ಸಾಲ ಕೊಡುವವನು ಕೂಡ ಬಹಳ ಜಾಗರೂಕನಾಗಿರಬೇಕು. ದುಡಿಕಿ ನಡೆದರೆ ನಷ್ಟವನ್ನು ಹೊಂದುವುದುಂಟು. ಮುಳ್ಳಿನ ಬೇಲಿಯಮೇಲೆ

ಹಾಕಿದ ಬಟ್ಟೆಯನ್ನು ಉಪಾಯವಾಗಿ ಬಿಡಿಸಿಕೊಳ್ಳುವಹಾಗೆ ಸಾಲಕೊಟ್ಟವನು ತನ್ನ ಹಣವನ್ನು ಬಹಳ ಉಪಾಯದಿಂದ ಬರಮಾಡಿಕೊಳ್ಳಬೇಕು. ಸಾಲ ತೆಗೆದುಕೊಂಡಿರತಕ್ಕವನು ಆಸ್ತಿವಂತನಾಗಿಯೂ ಮಾನಿಷ್ಠನಾಗಿಯೂ ಇದ್ದರೆ ಖಂಡಿತೋಕ್ತಿಗಳಿಂದ ಹಣವನ್ನು ಬರಮಾಡಿಕೊಳ್ಳಬಹುದು. ಅವನು ಆಸ್ತಿಯಿಲ್ಲದವನಾಗಿಯೂ ತಾನು ಮಾಡತಕ್ಕ ಆರ್ಜನೆಯಿಂದಲೇ ಸಾಲ ತೀರಿಸಬೇಕಾದವನಾಗಿಯೂ ಅನುಪಪನ್ನನಾಗಿಯೂ ಇದ್ದರೆ ಅಂಥವನಿಂದ ಸಾಲವನ್ನು ಬರಮಾಡಿಕೊಳ್ಳುವುದರಲ್ಲಿ ಸಾಮ ದಾನಗಳನ್ನೇ ತೋರಿಸಬೇಕು. ದುಡುಕಿ ಕೋರ್ಟಿಗೆ ಎಳೆದು ಜಪ್ತಿ ಹರಾಜು ಸಿವಿಲ್ ಜೈಲ್ ವಗೈರೆಗಳನ್ನು ಮಾಡಿಸಿ ಅಪಮಾನಪಡಿಸಿದ ಪಕ್ಷದಲ್ಲಿ ಇದಕ್ಕೋಸ್ಕರ ವೆಚ್ಚಮಾಡಿದ ಹಣವೆಲ್ಲವೂ ಹೀಗೆ ದುಡುಕಿನಡೆದುದಕ್ಕೆ ಕೊಟ್ಟ ಜುಲ್ಮಾನೆಯಂತೆ ಪರಿಣಮಿಸುವುದು. ಕೋರ್ಟಿಗೆ ಎಳೆಯಲ್ಪಟ್ಟವನು ತಾನು ಹೊಂದಿದ ಅಪಮಾನಗಳಿಂದಲೂ ಹಿಂಸೆಯಿಂದಲೂ ಭಂಡನಾಗಿ "ಮಾನವಂತು ಹೋಯಿತು, ಇನ್ನು ಏನುಬೇಕಾದರೂ ಮಾಡಿಕೊಳ್ಳಲಿ, ಇವರಿಗೆ ತಕ್ಕ ಪ್ರತೀಕಾರ ಮಾಡುತ್ತೇನೆ," ಎಂದು ಪ್ರತಿಜ್ಞೆಮಾಡಿ, ಸಾಲ ಕೊಟ್ಟವನಿಗೆ ಅಸಲಿಗೂ ಲೋಪವಾಗುವಂತೆ ಮಾಡುವನು. ಆದುದರಿಂದ ಸಾಲ ಕೊಟ್ಟವನೂ ತೆಗೆದುಕೊಂಡವನೂ ಪರಸ್ಪರ ದ್ವೇಷಿಗಳಾಗದೆ ಕ್ಷೇಮ ಚಿಂತಕರಾಗುವುದು ಉಭಯರಿಗೂ ಒಳ್ಳೆಯದು.

## ವೃತ್ತಿಗಳ ಘನತೆ.

ಜೀವನಾರ್ಥೀ ಪುಮಾನ್ ಲೋಕೇ ಯಾಂ ವೃತ್ತಿಮುಪಲಪ್ಸ್ಯತೇ |
ತತ್ರ ಸಾಧು ಶ್ರಮಂ ಕುರ್ಯಾತ್ ಅನ್ಯಥಾ ಹೀಯತೇ ಧ್ರುವಂ ||

ಲೋಕದಲ್ಲಿ ಪರಿಚಾರಿಕೆ ಝಾಡಮಾಲಿ ಮೊದಲುಗೊಂಡು ದೊಡ್ಡ ದೊಡ್ಡ ಅಧಿಕಾರಗಳವರೆಗೂ ಜೀವನೋಪಾಯವನ್ನುಂಟುಮಾಡತಕ್ಕ

ವೃತ್ತಿಗಳು ಅನೇಕವಿರುತ್ತವೆ. ಅವುಗಳಲ್ಲಿ ಜನರು ತಮ್ಮ ಕಾಯಶಕ್ತಿಗೂ ಬುದ್ಧಿಶಕ್ತಿಗೂ ತಿಳವಳಕೆಗೂ ತಕ್ಕಂತಹ ವೃತ್ತಿಗಳನ್ನು ಅವಲಂಬಿಸುವರು. ಹೀಗೆ ಅವಲಂಬಿಸುವಾಗ ಕೆಲವುವೃತ್ತಿಗಳಲ್ಲಿ ದ್ರವ್ಯವು ವಿಶೇಷವಾಗಿಯೂ, ಮತ್ತೆ ಕೆಲವುವೃತ್ತಿಗಳಲ್ಲಿ ಜೀವನಕ್ಕೆ ತಕ್ಕಷ್ಟೂ, ಇನ್ನು ಕೆಲವುವೃತ್ತಿಗಳಲ್ಲಿ ಕಷ್ಟದಿಂದ ಜೀವಿಸುವಷ್ಟೂ ಸಿಕ್ಕುತ್ತದೆ. ವಿಶೇಷ ದ್ರವ್ಯಾರ್ಜನೆಗೆ ಸಾಧಕಗಳಾದ ವೃತ್ತಿಗಳಲ್ಲಿ ಪ್ರವೇಶವುಂಟಾಗಬೇಕಾದರೆ ವಿಶೇಷ ದ್ರವ್ಯವ್ಯಯವನ್ನೂ ಕಾಯಕ್ಲೇಶ ಮನಃಕ್ಲೇಶಗಳನ್ನೂ ಅನುಭವಿಸಬೇಕಾಗುತ್ತದೆ. ಹೀಗೆ ಮಾಡಿದವರು ಹೆಚ್ಚಾದ ದ್ರವ್ಯವನ್ನು ಸಂಪಾದಿಸಿ ಸೌಖ್ಯವನ್ನು ಪಡೆಯುವರು. ಅನೇಕರು ವಿಶೇಷ ದ್ರವ್ಯಾರ್ಜನೆಗೆ ಸಾಧಕಗಳಾದ ವೃತ್ತಿಗಳಲ್ಲಿ ಯೋಗ್ಯತೆಯನ್ನು ಸಂಪಾದಿಸುವುದಕ್ಕೆ ತಕ್ಕ ಉಪಪತ್ತಿಯಿಲ್ಲದಿರುವರು. ಇನ್ನು ಕೆಲವರು ಇದಕ್ಕಾಗಿ ಕಾಯಕ್ಲೇಶ ಮನಃಕ್ಲೇಶಗಳನ್ನು ಅನುಭವಿಸುವುದಕ್ಕಿಂತ ಸದ್ಯಕ್ಕೆ ಸಂತೋಷಜನಕಗಳಾದ ಆಟಪಾಟಗಳಲ್ಲಿ ಕಾಲಹರಣಮಾಡೋಣವೆಂದು ಇರುವರು ; ಮತ್ತೆ ಕೆಲವರು ಇದಕ್ಕಾಗಿ ವಿಶೇಷದ್ರವ್ಯವ್ಯಯವನ್ನು ಮಾಡುವುದಕ್ಕೆ ಉಪಪತ್ತಿಯಿಲ್ಲದೆಯೂ ಕಾಯಕ್ಲೇಶ ಮನಃಕ್ಲೇಶಗಳನ್ನನುಭವಿಸುವುದಕ್ಕೆ ಶಕ್ತಿಯಿಲ್ಲದೆಯೂ ಇರುವರು. ಕೊನೆಗೆ ಉಪಪತ್ತಿಯಿಲ್ಲದವರೂ, ಆಟಪಾಟಗಳಲ್ಲಿ ಕಾಲಹರಣಮಾಡಿದವರೂ ವಿಶೇಷಲಾಭವಿಲ್ಲದ ವೃತ್ತಿಗಳಿಂದಲಾಗಲಿ ಅತ್ಯಂತಕಷ್ಟದಿಂದ ಜೀವಿಸತಕ್ಕ ವೃತ್ತಿಗಳಿಂದಲಾಗಲಿ ಜೀವಿಸಬೇಕಾಗುವುದು.

ಲೋಕದಲ್ಲಿ ದೊಡ್ಡ ಅಧಿಕಾರಿಗಳೂ ವಿಶೇಷ ಆಯತಿಯುಳ್ಳವರೂ ಹೇಗಿದ್ದರೂ ಜನರ ಗೌರವಕ್ಕೆ ಪಾತ್ರರಾಗುವರು. ಆದರೆ ಪರಿಚಾರಕ ಝಾಡಮಾಲಿ ಮೊದಲಾದವರು ತಾವು ಅವಲಂಬಿಸಿದ ವೃತ್ತಿಯನ್ನು ಶ್ರದ್ಧೆಯಿಂದಲೂ ನಿಯತ್ತಿನಿಂದಲೂ ಮಾಡುತಬಂದರೆ ಅವರೂಕೂಡ ಜನರ ಗೌರವಕ್ಕೂ ಪ್ರೀತಿಗೂ ಪಾತ್ರರಾಗುವರು. ನಿಯತ್ತಿನಿಂದ ನಡೆಯತಕ್ಕ ಇತರ

ವೃತ್ತಿಗಳವರನ್ನು ಎಲ್ಲರೂ ಹುಡುಕುತ್ತಿರುವರು. ಹೀಗಿದ್ದರೂ ಪೂರ್ವಾಪರ ಜ್ಞಾತೆಯಿಲ್ಲದವರು ತಮ್ಮ ಕೆಲಸಗಳನ್ನು ಸರಿಯಾಗಿ ಮಾಡದೆ ಅಗೌರವಕ್ಕೂ ಅಪ್ರೀತಿಗೂ ಪಾತ್ರರಾಗುತ್ತಾರೆ. ಲೋಕದಲ್ಲಿ ಕೃಷಿ ವಾಣಿಜ್ಯ ಮೊದಲಾದ ಕೆಲಸಗಳನ್ನೂ ಕೂಲಿ ಮೊದಲಾದುವುಗಳನ್ನೂ ಮಾಡತಕ್ಕವರು ನಿಜವಾದ ಲೋಕಬಂಧುಗಳಾಗಿರುವರು. ಇವರಲ್ಲಿ ನಿಯತ್ತಿನಿಂದ ನಡೆಯುತ್ತಿರುವ ಅನೇಕರು ಬಡವರಾಗಿದ್ದರೂ ವಿಶೇಷನಂಬಿಕೆಗೂ ಪ್ರೀತಿಗೂ ಗೌರವಕ್ಕೂ ಪಾತ್ರರಾಗಿರುವುದು ಅನುಭವಸಿದ್ಧವಾಗಿದೆ. ಉಡಿಗೆ ತೊಡಿಗೆಗಳಿಂದ ಅಲಂಕೃತರಾಗಿಯೂ ನ್ಯಾಯಮಾರ್ಗಪರಾಙ್ಮುಖರಾಗಿಯೂ ಇರುವ ಧನಪಿಶಾಚಗಳಿಗಿಂತಲೂ ಇಂಥವರು ಜನರ ಅನುರಾಗಕ್ಕೆ ವಿಶೇಷವಾಗಿ ಪಾತ್ರರಾಗುವರು. ಸೌಖ್ಯಕ್ಕೆ ದ್ರವ್ಯವೇ ಮುಖ್ಯಕಾರಣವಲ್ಲ ; ಕುಬೇರನ ಐಶ್ವರ್ಯಕ್ಕೆ ಸಮವಾದ ಐಶ್ವರ್ಯವುಳ್ಳವರುಕೂಡ ಬಡವರಿಗಿಂತ ಹೆಚ್ಚಾಗಿ ಸೌಖ್ಯಪಡುವುದಿಲ್ಲ. ಆದುದರಿಂದ ಸಕಲರೂ ತಮ್ಮ ಶಕ್ತಿಗೂ ಬುದ್ಧಿಗೂ ಅನುರೂಪವಾಗಿ ಸದ್ವೃತ್ತಿಗಳನ್ನವಲಂಬಿಸಿ ವೃಥಾ ಲೋಕಸಂಕೇತದಿಂದ ಅಯುಕ್ತವೆನ್ನಿಸಿಕೊಳ್ಳುವುಗಳಿಗೆ ಹಿಂಜರಿಯದೆ ನಿಯತ್ತಿನಿಂದ ನಡೆದುಕೊಳ್ಳುತಬಂದರೆ ಅಂಥವರು ಕ್ರಮವಾಗಿ ಉನ್ನತದಶೆಗೂ ಹೆಸರವಾಸಿಗೂ ಬರುವುದರಲ್ಲಿ ಸಂಶಯವಿಲ್ಲ.

ಲೋಕದಲ್ಲಿ ಅನೇಕವೃತ್ತಿಗಳಿರುವುವು. ಅವುಗಳಲ್ಲಿ ಯಾವುದನ್ನು ಅವಲಂಬಿಸಿದರೂ ಅದರಿಂದಲೇ ಗೌರವವಾಗಿರಬಹುದು. ಆದರೆ ಅವಲಂಬಿಸಿದ ವೃತ್ತಿಗಳಲ್ಲಿ ಶ್ರದ್ಧೆಯಿಲ್ಲದೆ ಅನೇಕರು ಕೆಡುವರು. ಮತ್ತೆ ಕೆಲವರು ತಾವು ಅವಲಂಬಿಸಿದ ವೃತ್ತಿಯಲ್ಲಿ ಸರಿಯಾಗಿ ಜೀವನವಾಗುವುದಿಲ್ಲವೆಂದು ಬೇರೆ ವೃತ್ತಿಯನ್ನು ಹಿಡಿದು ಅದರಲ್ಲಿಯೂ ಬದುಕುವ ಮಾರ್ಗತೋರದೆ ನಾನಾವಿಧವಾದ ಕ್ಲೇಶಗಳನ್ನು ಅನುಭವಿಸುತ್ತಿರುವರು. ಪ್ರಥಮತಃ ಉಪಕ್ರಮಿಸಿದ ಕೆಲಸವು ಫಲೋನ್ಮುಖವಾಗುವವರೆಗೂ ಸರಿಯಾಗಿ ಕೆಲಸಮಾಡ

ದಿರುವುದೇ ಹೀಗಾಗುವುದಕ್ಕೆ ಮುಖ್ಯಕಾರಣವು. ಹಿಡಿದ ಕೆಲಸದಲ್ಲಿ ಜಾಗ್ರತೆಯಾಗಿ ಫಲೋದಯವಾಗದಿದ್ದಮಾತ್ರದಿಂದಲೇ ಆ ಕೆಲಸದಲ್ಲಿ ಫಲ ಪ್ರಾಪ್ತಿಯಾಗುವುದಿಲ್ಲವೆಂದು ಭಾವಿಸಕೂಡದು. ಫಲವಾಗದಿರುವುದಕ್ಕೆ ಕಾರಣಗಳು ಅನೇಕವಾಗಿರುತ್ತವೆ. ಅವುಗಳನ್ನು ಪರೀಕ್ಷಿಸಿ ಫಲಪ್ರಾಪ್ತಿಯಾಗುವಂತೆ ಮತ್ತೆ ಅದೇ ಕೆಲಸವನ್ನು ಮಾಡುವುದು ಶ್ರೇಯಸ್ಕರವಾದುದು.

ಹೀಗೆ ಮಾಡಲ್ಪಟ್ಟ ಕೆಲಸವು ಫಲದಾಯಕವಾಗದಿದ್ದರೂ ಪುನಃ ಅದನ್ನೇ ಮಾಡಬೇಕು. ಇದೇಪ್ರಕಾರ ಫಲೋದಯವಾಗುವವರೆಗೂ ಪ್ರಯತ್ನಮಾಡುತ್ತಿರುಪವನೇ ಆದರಿಂದುಂಟಾಗತಕ್ಕ ಲಾಭವನ್ನು ಅನುಭವಿಸುವುದಕ್ಕೆ ಅರ್ಹನು ವಿಘ್ನಗಳಿಗೆ ಭಯಪಟ್ಟು ಕಾರ್ಯವನ್ನು ಸಾಧಿಸದೆ ಬಿಡತಕ್ಕವನು ಯಾವ ವೃತ್ತಿಯಲ್ಲಿಯೂ ಇಷ್ಟಾರ್ಥವನ್ನು ಪಡೆಯಲಾರನು. ಕ್ರಿಮಿ ಕೀಟಾದಿಗಳೂ ಕೂಡ ಕಾರ್ಯಸಾಧನೆಯಾಗುವವರೆಗೂ ಹಿಡಿದ ಕೆಲಸವನ್ನು ಬಿಡುವುದಿಲ್ಲ. ನೊಣ ಇರುವೆ ಮೊದಲಾದುವುಗಳು ಮಧುರವಾದ ಪದಾರ್ಥಗಳಿರತಕ್ಕ ಸ್ಥಳದಿಂದ ಎಷ್ಟುಸಲ ಓಡಿಸಲ್ಪಟ್ಟರೂ ಪುನಃಪುನಃ ಅದನ್ನೇ ಹಿಡಿದುಕೊಳ್ಳುವುದಕ್ಕೆ ಬರುತ್ತವೆ. ವಿಘ್ನಗಳಿಗೆ ಹೆದರಿ ತಮ್ಮ ಪ್ರಯತ್ನಗಳನ್ನು ಅವುಗಳು ಬಿಡುವುದಿಲ್ಲ. ಇವುಗಳಿಗಿಂತಲೂ ವಿಶೇಷವಾದ ತಿಳವಳಿಕೆಯುಳ್ಳ ಮನುಷ್ಯರು ಒಂದುವೇಳೆ ಹಿಡಿದ ಕೆಲಸಗಳು ಫಲಪ್ರದವಾಗದಿದ್ದಮಾತ್ರದಿಂದಲೇ ಪುನಃ ಪ್ರಯತ್ನಮಾಡದೆ ಸುಮ್ಮನಿರುವುದು ಸರಿಯಲ್ಲ.

ವಿಘ್ನಗಳಿಗೆ ಭಯಪಡತಕ್ಕವರು ಎಂದಿಗೂ ಉನ್ನತಸ್ಥಿತಿಗೆ ಬರುವುದಿಲ್ಲ. ಇದಕ್ಕೆ ದೃಷ್ಟಾಂತವಾಗಿ ಸ್ಕಾಟ್ಲೆಂಡಿನ ಚರಿತ್ರೆಯಲ್ಲಿ ಒಂದು ಕಥೆಯಿರುವುದು. ಪೂರ್ವದಲ್ಲಿ ಇಂಗ್ಲೀಷ್‌ಜನರಿಗೂ ಸ್ಕಾಟ್ಲೆಂಡಿನವರಿಗೂ ಪರಸ್ಪರ ಯುದ್ಧವು ನಡೆಯುತ್ತಿತ್ತು. ಸ್ಕಾಟ್ಲೆಂಡ್ ಧೊರೆಯಾದ ರಾಬರ್ಟ್ ಬ್ರೂಸ್ ಎಂಬವನು ಆರುಸಲ ಯುದ್ಧಮಾಡಿ ಪರಾಜಿತನಾದನು. ಆ

ಯುದ್ಧಗಳಲ್ಲಿ ಅವನ ಸಹೋದರ ಮೊದಲಾದ ಬಂಧುವರ್ಗದವರೂ ಮಿತ್ರರೂ ಪ್ರಜೆಗಳಲ್ಲಿ ಅನೇಕರೂ ಮಡಿದರು. ರಾಬರ್ಟ್ ಬ್ರೂಸನು ಆರನೆಯಸಲ ಸೋತಮೇಲೆ ಯುದ್ಧರಂಗದಿಂದ ಓಡಿಹೋಗಿ ಒಬ್ಬ ರೈತನ ವೇಷವನ್ನು ಹಾಕಿಕೊಂಡು ಒಂದು ಗ್ರಾಮವನ್ನು ಪ್ರವೇಶಿಸಿ ಅಲ್ಲಿ ಒಬ್ಬ ರೈತನ ಮನೆಯಲ್ಲಿ ವಿಶ್ರಾಂತಿಗೆ ಸ್ಥಳವನ್ನೂ ಸ್ವಲ್ಪ ಆಹಾರವನ್ನೂ ಅಪೇಕ್ಷಿಸಿದನು. ಹೀಗೆ ಆ ದೊರೆಯು ಭೋಜನಮಾಡಿ ವಿಶ್ರಮಿಸಿಕೊಳ್ಳುವುದಕ್ಕೆ ಪ್ರಯತ್ನಮಾಡಿದರೂ ತನ್ನ ದೇಶಕ್ಕೂ ಬಂಧುವರ್ಗಕ್ಕೂ ಮಿತ್ರಮಂಡಲಿಗೂ ಪ್ರಜೆಗಳಿಗೂ ಉಂಟಾದ ಅನರ್ಥಗಳ ಸ್ಮರಣೆಯು ಅವನಿಗೆ ವಿಶ್ರಾಂತಿಯನ್ನು ಕೊಡದೆ ಅತ್ಯಂತ ಸಂತಾಪವನ್ನುಂಟುಮಾಡುತ್ತಿದ್ದುವು. ಈ ಸಂದರ್ಭದಲ್ಲಿ ಆ ರಾಜನು ಆತ್ಮಹತ್ಯೆಯನ್ನಾದರೂ ಮಾಡಿಕೊಳ್ಳಬೇಕೆಂದು ಯೋಚಿಸುತ್ತಿದ್ದನು. ಆಗ ಇವನು ಮಲಗಿದ್ದ ಕೊಟಡಿಯ ಮೇಲುಗಡೆ ಒಂದು ಜೇಡಹುಳವು ಒಂದ ತೊಲೆಯಿಂದ ಇನ್ನೊಂದುತೊಲೆಗೆ ದಾರವನ್ನು ಕಟ್ಟುವುದಕ್ಕೆ ಪ್ರಯತ್ನಿಸುತಿತ್ತು. ಆರುಸಲ ಈ ಹುಳುವಿನ ಪ್ರಯತ್ನವು ನಿಷ್ಫಲವಾಯಿತು. ಆಗ ದೊರೆಯು 'ಈ ಹುಳುವಿನ ಅವಸ್ಥೆಯೂ ನನ್ನ ಅವಸ್ಥೆಯೂ ಎರಡೂ ಸಮವಾಗಿವೆ. ನಾನು ಆರುಸಲ ಪರಾಜಿತನಾದೆನು; ಇದರ ಪ್ರಯತ್ನವೂ ಆರುಸಲ ನಿಷ್ಫಲವಾಯಿತು. ಈ ಹುಳುವು ಪುನಃ ಪ್ರಯತ್ನಮಾಡಿ ತನ್ನ ದಾರವನ್ನು ಕಟ್ಟಿದಪಕ್ಷದಲ್ಲಿ ನಾನೂ ಶತ್ರುಗಳನ್ನು ಜಯಿಸುವುದಕ್ಕೆ ಮತ್ತೆ ಪ್ರಯತ್ನವನ್ನು ಮಾಡುತ್ತೇನೆ; ಇದು ಈಸಲ ಸೋತಪಕ್ಷದಲ್ಲಿ ನಾನೂ ಯುದ್ಧವನ್ನು ಮಾಡುವುದಿಲ್ಲ.' ಎಂದು ಆ ಜೇಡಹುಳುವಿನ ಪ್ರಯತ್ನವನ್ನು ನೋಡುತ್ತಿದ್ದನು. ಏಳನೆಯಸಾರಿ ಆ ಹುಳುವು ತನ್ನ ಶಕ್ತಿಯನ್ನೆಲ್ಲಾ ಬಿಟ್ಟು ತನ್ನ ದಾರವನ್ನು ಬೇರೆ ತೊಲೆಗೆ ಕಟ್ಟಿತು. ಇದರಿಂದ ರಾಬರ್ಟ್ ಬ್ರೂಸನೂ ಧೈರ್ಯೋತ್ಸಾಹಗಳನ್ನು ತಂದುಕೊಂಡು ಪುನಃ ತನ್ನ ಸಾಮರ್ಥ್ಯವನ್ನೆಲ್ಲಾ ತೋರಿಸಿ

ಇಂಗ್ಲೀಷರಮೇಲೆ ಯುದ್ಧಮಾಡಿದನು. ಆ ಯುದ್ಧದಲ್ಲಿ ಇಂಗ್ಲೀಷರು ಸಂಪೂರ್ಣವಾಗಿ ಪರಾಜಿತರಾಗಿ ಸ್ಕಾಟ್ಲೆಂಡಿನಿಂದ ಓಡಿಹೋದರು. ಈಗಲೂ ಸ್ಕಾಟ್ಲೆಂಡ್ ನಿವಾಸಿಗಳು ಜೇಡಹುಳವು ತಮ್ಮ ದೇಶಕ್ಕೆ ಜಯವನ್ನು ಕಲ್ಪಿಸಿದ ಪ್ರಾಣಿಯೆಂದು ಭಾವಿಸಿ ಅದನ್ನು ವಿಶೇಷ ದಯೆಯಿಂದ ಕಾಣುತ್ತಾರೆ. ಹೀಗೆ ಇಷ್ಟಾರ್ಥಪ್ರಾಪ್ತಿಯಲ್ಲಿ ಆಸಕ್ತಿಯುಳ್ಳವರು ತಾವು ಮಾಡತಕ್ಕ ಪ್ರಯತ್ನಗಳಲ್ಲಿ ಒಂದುವೇಳೆ ಪರಾಜಿತರಾದರೂ ಅದಕ್ಕೆ ಹಿಂಜರಿಯದೆ ಫಲಪ್ರಾಪ್ತಿಯಾಗುವವರೆಗೂ ಪುನಃಪುನಃ ಪ್ರಯತ್ನಮಾಡಿ ಇಷ್ಟಾರ್ಥವನ್ನು ಸಾಧಿಸಿಕೊಳ್ಳಬೇಕು.



## ಕಾಲ.

न निवर्तयितुं शक्या प्रवहन्ती नदी यथा ।
तद्वत् कालोऽप्यतिक्रान्तः तन्न कालं क्षिपेद्वृथा ॥

(in Kannada script:)

ನ ನಿವರ್ತಯಿತುಂ ಶಕ್ಯಾ ಪ್ರವಹನ್ತೀ ನದೀ ಯಥಾ |
ತದ್ವತ್ ಕಾಲೋಽಪ್ಯತಿಕ್ರಾಂತಃ ತನ್ನ ಕಾಲಂ ಕ್ಷಿಪೇದ್ವೃಥಾ ||

ಲೋಕದಲ್ಲಿ ಎಂತಹ ವಸ್ತುವನ್ನು ಕಳೆದುಕೊಂಡರೂ ಮತ್ತೆ ಅದರಂತಹುದನ್ನೇ ಆಗಲಿ ಅಥವಾ ಅದಕ್ಕಿಂತಲೂ ಅಧಿಕವಾದುದನ್ನೇ ಆಗಲಿ ಸಂಪಾದಿಸಬಹುದು. ಕಾಲವನ್ನು ಕಳೆದುಕೊಂಡಮೇಲೆ ಅದನ್ನು ಪುನಃ ಸಂಪಾದಿಸುವುದಕ್ಕೆ ಆಗುವುದಿಲ್ಲ. ಆದುದರಿಂದ ಕಾಲಕ್ಕಿಂತ ಹೆಚ್ಚಾದುದು ಯಾವುದೂ ಇಲ್ಲ. ಕಾಲದ ಬೆಲೆಯು ಅಭಿವೃದ್ಧಿಸಾಧಕಗಳಾದ ಕೆಲಸಗಳನ್ನು ಮಾಡುವವರಿಗೆ ತಿಳಿಯುವಹಾಗೆ ಇತರರಿಗೆ ಗೊತ್ತಾಗುವುದಿಲ್ಲ. ಬಾಲ್ಯದಿಂದಲೂ ಕಾಲವನ್ನು ವ್ಯರ್ಥವಾಗಿ ಕಳೆಯದೆ ಪೂರ್ವಾಪರಜ್ಞತೆಗೆ ಬೀಜಭೂತಗಳಾದ ವಿದ್ಯಾವ್ಯಾಸಂಗಗಳಲ್ಲಿಯೂ, ಗೌರವವಾಗಿ ಜೀವಿಸುವುದಕ್ಕೆ ಸಾಧಕಗಳಾದ ವೃತ್ತಿಗಳ ಮರ್ಮಗಳನ್ನು ತಿಳಿದುಕೊಳ್ಳುವುದರಲ್ಲಿಯೂ, ಆರೋಗ್ಯ ದೃಢಕಾಯರಾಗಿರುವುದಕ್ಕೆ ಸಾಧಕಗಳಾದ ವ್ಯಾಯಾಮಗಳನ್ನು ಮಾಡುವುದರಲ್ಲಿಯೂ ಕಾಲವನ್ನು ವಿನಿಯೋಗಿಸತಕ್ಕವರು ಅದರ ಫಲ

ವನ್ನು ಅನುಭವಿಸುವರು. ಪ್ರಾಯಶಃ ಬಾಲಕರಿಗೆ ಹುಡುಗತನದಲ್ಲಿ ಉತ್ತರತ್ರ ಫಲದಾಯಕಗಳಾದ ಕಾರ್ಯಗಳು ರುಚಿಸುವುದು ಪೂರ್ವ. ಆ ಕಾಲದಲ್ಲಿ ನಿರರ್ಥಕವಾದ ಆಟಗಳಲ್ಲಿ ಪ್ರವರ್ತಿಸಿ ಕೊನೆಗೆ ದರಿದ್ರಾವಸ್ಥೆಗೆ ಬಂದು ಇಹಪರಗಳನ್ನು ಕೆಡಿಸಿಕೊಳ್ಳುವುದಕ್ಕೆ ಆಸ್ತಿಭಾರ ಹಾಕಿಕೊಳ್ಳು ವವರೇ ವಿಶೇಷವಾಗಿರುವರು.

ಯಾರು ತಮ್ಮ ಕಾಲವನ್ನು ಸರಿಯಾಗಿ ಉಪಯೋಗಿಸುವರೋ ಅವರೂ ಅವರ ಕುಟುಂಬದವರೂ ಸೌಖ್ಯವನ್ನು ಅನುಭವಿಸುವರು. ಇಂಥ ಜನರು ಇರುವ ದೇಶವೂಕೂಡ ಉನ್ನತವಾದ ದಶೆಯಲ್ಲಿರುವುದು. ಕಾಲ ವನ್ನು ವ್ಯರ್ಥವಾಗಿ ಕಳೆಯುತಕ್ಕವರು ಆರ್ಭಶ್ರೀಮಂತರಾಗಿದ್ದರೂ ಅಂಥ ವರು ದಿನಕ್ರಮೇಣ ದರಿದ್ರಸ್ಥಿತಿಗೆ ಬರುವುದರಲ್ಲಿ ಸಂಶಯವಿಲ್ಲ. ಬಡವ ರಾದವರೂಕೂಡ ಬಾಲ್ಯದಿಂದಲೂ ವಿದ್ಯೆ ಕೈಗಾರಿಕೆ ಮೊದಲಾದುವುಗಳನ್ನು ಅಭ್ಯಾಸಮಾಡುವುದರಲ್ಲಿ ತಮ್ಮ ಕಾಲವನ್ನು ಸರಿಯಾಗಿ ವಿನಿಯೋಗಿಸಿ ಗೌರವಕರವಾದ ಪದವಿಗೆ ಬಂದಿರುವುದಕ್ಕೆ ಎಲ್ಲಾ ದೇಶಗಳಲ್ಲಿಯೂ ದೃಷ್ಟಾಂತಗಳಿವೆ. ಪ್ರಾಯಕವಾಗಿ ಜನರು "ಬೆಳಗಾಯಿತು, ಮಧ್ಯಾಹ್ನ ವಾಯಿತು, ಸಾಯಂಕಾಲವಾಯಿತು, ರಾತ್ರಿಯಾಯಿತು, ವಸಂತಋತು ಬಂದಿತು, ಶಿಶಿರಋತು ಬಂದಿತು," ಎಂಬುದಾಗಿ ಮುಂದೆಮುಂದೆ ಬರುವ ಕಾಲವನ್ನು ಪರಿಗಣಿಸುತ್ತಾ ಆಟಪಾಟಗಳಿಂದ ಹೊತ್ತುಕಳೆದುಕೊಂಡಿರು ವರೇಹೊರತು 'ತಮ್ಮ ಆಯುಸ್ಸಿನಲ್ಲಿ ಇಷ್ಟು ಕಾಲವು ವ್ಯರ್ಥವಾಗಿ ಹೋಯಿತು' ಎಂಬುದನ್ನು ಯೋಚಿಸುವವರೇ ಅಪೂರ್ವ. ಜನರು ಇದನ್ನು ಪರ್ಯಾಲೋಚಿಸಿ ಶ್ರೇಯೋಭಿವೃದ್ಧಿಗೆ ಸಾಧಕಗಳಾದ ಕೆಲಸಗಳಲ್ಲಿ ಕಾಲ ವನ್ನು ವಿನಿಯೋಗಿಸುವುದು ಲಾಭಕರವಾದುದು.

ಪ್ರಯೋಜನವನ್ನಪೇಕ್ಷಿಸುವವರೆಲ್ಲರೂ ಇಂಥಿಂಥ ಕೆಲಸಗಳನ್ನು ಇಂಥಿಂಥ ಕಾಲಗಳಲ್ಲಿ ಮಾಡಬೇಕೆಂದು ಗೊತ್ತುಮಾಡಿಕೊಂಡು ಅದಕ್ಕನು

ಸಾರವಾಗಿ ಮಾಡುತ್ತ ಬರಬೇಕು. ಕೆಲಸಮಾಡುವವರು ಅಲಸರಾಗಿರ
ಕೂಡದು. ಕಾಲವು ಇವರಿಗೋಸ್ಕರ ನಿಲ್ಲುವುದಿಲ್ಲ. ಆಲಸ್ಯದಿಂದ ಕೆಲಸ
ಮಾಡುವವರಿಗೆ ಕಾಲವು ಸಾಲದೆ ಪ್ರಯೋಜನವು ಬಹಳ ಕಡಿಮೆಯಾಗು
ವುದು. ಚೆನ್ನಾಗಿ ಕೆಲಸಮಾಡಿ ಅಭಿವೃದ್ಧಿಗೆ ಬರುವವರೆಲ್ಲರೂ ತಾವು
ಮಾಡತಕ್ಕ ಕೆಲಸಗಳಲ್ಲಿ ಮಾಡಿಕೊಂಡಿರುವ ಕಾಲನಿಬಂಧನೆಯಪ್ರಕಾರ
ಯಾವಾಗ ಯಾವುದನ್ನು ಮಾಡಬೇಕೋ ಆಗ ಅದನ್ನು ಮಾಡುವರು. ಈ
ಗುಣವು ಇಂಗ್ಲೀಷ್ ಜನಗಳಲ್ಲಿ ಚೆನ್ನಾಗಿ ಆಚರಣೆಯಲ್ಲಿರುತ್ತದೆ. ಅವರು
ಆಹಾರ ವಿಹಾರ ನಿದ್ರೆ ಇವುಗಳಲ್ಲದೆ, ತಾವು ಮಾಡತಕ್ಕ ಸರ್ಕಾರಿ ಸಾಹು
ಕಾರಿ ಕೈಗಾರಿಕೆ ಮೊದಲಾದ ಕೆಲಸಗಳಲ್ಲಿಕೂಡ ಕಾಲವನ್ನು ಕ್ಲೃಪ್ತ
ಮಾಡಿಕೊಂಡು ಒಂದು ನಿಮಿಷವೂ ಹೆಚ್ಚು ಕಡಿಮೆಯಾಗದಹಾಗೆ ಅವು
ಗಳನ್ನು ಮಾಡುವರು.

ರೈಲೂ ಟಪಾಲುಗಳೂ ಇಷ್ಟು ಹೊತ್ತಿಗೆ ಬರುವುವು, ಇಷ್ಟು ಹೊತ್ತಿಗೆ
ಹೊರಡುವುವು ಎಂಬುದಾಗಿ ನಿಬಂಧನೆಯು ಏರ್ಪಟ್ಟಿರುತ್ತದೆ. ಆ ನಿಬಂಧ
ನೆಯಪ್ರಕಾರ ಪ್ರಯಾಣಸ್ಥರೇ ಮೊದಲಾದವರು ತಮ್ಮ ಸೋಮಾರಿತನ
ವನ್ನು ಬಿಟ್ಟು ನಡೆಯಬೇಕಾಗುತ್ತದೆ. ಕ್ಲೃಪ್ತವಾದ ಕಾಲಗಳಲ್ಲಿ ಕೆಲಸ
ಗಳನ್ನು ಮಾಡುವುದರಿಂದ ವಿಶೇಷ ಲಾಭವುಂಟಾಗುವುದು. ಅದರಲ್ಲಿ
ವ್ಯತ್ಯಾಸವಾದರೆ ಲಾಭಕ್ಕೆ ಬದುಲಾಗಿ ನಷ್ಟವುಂಟಾಗುವುದು. ಆದುದರಿಂದ
ಕಾಲವನ್ನು ಕ್ಲೃಪ್ತಮಾಡಿಕೊಂಡು ಅದರ ನಿಬಂಧನೆಗಳನ್ನು ಉಲ್ಲಂಘಿ
ಸದೆ ನಡೆಯುವುದು ಉದ್ದೇಶಿಸಿದ ಕಾರ್ಯಸಾಧನೆಗೆ ಸಹಕಾರಿಯಾದುದು.
ಕಾಲಕ್ಕೆ ಸರಿಯಾಗಿ ನಡೆಯತಕ್ಕ ನಡೆವಳಿಕೆಯು ಇಂಗ್ಲೀಷರಲ್ಲಿರುವಂತೆ
ಇತರಜನಾಂಗಗಳಲ್ಲಿಲ್ಲ. ಲೋಕದಲ್ಲಿ ಆಬಾಲವೃದ್ಧರಿಗೂ ಒಂದೊಂದು
ವಿಧವಾದ ಪ್ರಯೋಜನವನ್ನು ಹೊಂದಬೇಕೆಂಬ ಕೋರಿಕೆಯಿರುವುದು.
ಹೀಗೆ ಕೋರಿಕೆಯುಳ್ಳವರೆಲ್ಲರೂ ತಮ್ಮ ಕೆಲಸಗಳು ಸರಿಯಾಗಿ ನೆರವೇರು

ವುದಕ್ಕೆ ಕ್ಲೃಪ್ತವಾದ ಕಾಲನಿಬಂಧನೆಗಳನ್ನು ಮಾಡಿಕೊಂಡು ಅದನ್ನು ಲ್ಲಂಘಿಸದೆ ನಡೆಯಬೇಕು.



## ಹಿತಾಲಾಪ.

ಜಿಹ್ವಾಗ್ರೇ ವರ್ತತೇ ಲಕ್ಷ್ಮೀಃ ಜಿಹ್ವಾಗ್ರೇ ಮಿತ್ರಬಾನ್ಧವಾಃ |
ಜಿಹ್ವಾಗ್ರೇ ರಾಜಸನ್ಮಾನೋ ಜಿಹ್ವಾಗ್ರೇ ಮರಣಂ ಧ್ರುವಂ ||

ಹಿತವಾಗಿ ಮಾತನಾಡುವುದು ಉದ್ಯೋಗವ್ಯಾಪಾರಗಳಿಂದ ವೃದ್ಧಿ ಹೊಂದಬೇಕೆನ್ನತಕ್ಕವರಿಗೆ ಬಹಳ ಸಹಾಯಭೂತವಾದುದು. ಮಾತು ಬಲ್ಲವರಿಗೆ ಜಗಳವಿಲ್ಲವೆಂಬುದು ಸರ್ವರಿಗೂ ಗೊತ್ತೇಇದೆ ಹಿತವಾಗಿಯೂ ಸರಸವಾಗಿಯೂ ಮಾತನಾಡತಕ್ಕವರು ಸುಲಭವಾಗಿ ಸಮಸ್ತವಾದ ಇಷ್ಟಾರ್ಥಗಳನ್ನೂ ಸಾಧಿಸುವರು. ಎಲ್ಲಾ ವಿದ್ಯೆಗಳಿಗಿಂತಲೂ ಹಿತವಾಗಿ ಮಾತನಾಡತಕ್ಕ ವಿದ್ಯೆಯು ಬಹಳ ಲಾಭಕರವಾದುದು. ಆದರೂ ದ್ರವ್ಯದಮೇಲೂ ಯಶಸ್ಸಿನಮೇಲೂ ದೃಷ್ಟಿಯುಳ್ಳವರು ಸರಸವಾಗಿಯೂ ಹಿತವಾಗಿಯೂ ಮಾತನಾಡುವ ಶಕ್ತಿಯನ್ನು ಮಾತ್ರ ಆರ್ಜಿಸಿದರೆ ಸಾಕೆಂದು ತೃಪ್ತರಾಗಕೂಡದು. ಸತ್ಯವಾದುದನ್ನು ಸರಸವಾಗಿಯೂ ಹಿತವಾಗಿಯೂ ಇರುವಂತೆ ಹೇಳಿ ಅದರಿಂದ ಲಾಭಬಂದಪಕ್ಷದಲ್ಲಿ ಯಾವ ದೋಷವೂ ಇಲ್ಲ. ಅನೃತವಾಗಿಯೂ ಅಹಿತವಾಗಿಯೂ ಇರತಕ್ಕುದನ್ನು ಸತ್ಯವಾಗಿಯೂ ಹಿತವಾಗಿಯೂ ಇರುವಂತೆ ಹೇಳಿ ವಂಚನೆಮಾಡಿ ಅದರಿಂದ ಲಾಭವನ್ನು ಪಡೆಯುವುದು ಅತ್ಯಂತ ನಿಂದ್ಯವಾದುದು. ಆದುದರಿಂದ ಸತ್ಯಕ್ಕೆ ಚ್ಯುತಿಯಿಲ್ಲದೆ ಹಿತವಾಗಿ ಮಾತನಾಡತಕ್ಕ ಶಕ್ತಿಯನ್ನು ಸಂಪಾದಿಸಿಕೊಂಡು ಸನ್ಮಾರ್ಗದಲ್ಲಿ ಪ್ರವರ್ತಿಸಿ ನ್ಯಾಯ್ಯವಾದ ಮಾರ್ಗದಿಂದ ಸಾಧ್ಯವಾದ ಇಷ್ಟಾರ್ಥಗಳನ್ನೆಲ್ಲಾ ಆರ್ಜಿಸುವುದರಲ್ಲಿ ಆಸಕ್ತರಾಗತಕ್ಕವರಿಗೆ ಇಹಪರಗಳೆರಡೂ ದೊರೆಯುವುವು.

# ಪಾಲುಗಾರಿಕೆ.

ಏಕೇನ ಯದಸಾಧ್ಯಂ ಸ್ಯಾತ್ ತತ್ ಸಾಧ್ಯಂ ಬಹುಭಿರ್ಭವೇತ್ |
ತತ್ರ ಸರ್ವೇ ಸಮಾನಾಃ ಸ್ಯುಃ ಲಾಭೇ ನಷ್ಟೇ ಚ ಸರ್ವದಾ ||

ವ್ಯವಸಾಯ ವ್ಯಾಪಾರ ಮೊದಲಾದ ಅನೇಕ ಕೆಲಸಗಳಲ್ಲಿ ಕೆಲವು ಒಬ್ಬೊಬ್ಬರೇ ನಿರ್ವಹಿಸತಕ್ಕವುಗಳಾಗಿಯೂ ಮತ್ತೆ ಕೆಲವು ಅನೇಕರು ಸೇರಿ ನಿರ್ವಹಿಸತಕ್ಕವಾಗಿಯೂ ಇರುವುವು. ದೊಡ್ಡವಾಗಿಯೂ ವಿಶೇಷ ಬಂಡವಾಳವನ್ನು ಅಪೇಕ್ಷಿಸತಕ್ಕವಾಗಿಯೂ ಇರುವ ಕೆಲಸಗಳು ಒಬ್ಬೊಬ್ಬರಿಂದ ನಿರ್ವಹಿಸಲ್ಪಡುವುದಕ್ಕೆ ಆಗುವುದಿಲ್ಲ. ಈ ಕೆಲಸಕ್ಕೆ ಬೇಕಾದ ಬಂಡವಾಳವನ್ನು ಒಬ್ಬರೇ ಒದಗಿಸುವುದೂ ಕಷ್ಟ. ಇಂಥ ಸಂದರ್ಭಗಳಲ್ಲಿ ಅನೇಕರು ಸೇರಿ ಪಾಲನ್ನು ವಿಂಗಡಿಸಿಕೊಂಡು ತಮ್ಮ ಪಾಲಿಗೆ ಅನುರೂಪವಾದ ಬಂಡವಾಳವನ್ನು ಹಾಕಿ ಕಂಪೆನಿಯನ್ನು ಮಾಡಿಕೊಂಡು ಎಲ್ಲರೂ ಮೇಲುವಿಚಾರಣೆಯನ್ನು ತೆಗೆದುಕೊಳ್ಳುತ್ತ ಬಂದ ಲಾಭವನ್ನು ವರುಷಕ್ಕೊಂದುಸಲ ಅಥವಾ ಎರಡುಸಲ ಲೆಕ್ಕಾಚಾರಮಾಡಿ ತಮಗೆ ಗೊತ್ತಾದ ಪಾಲಿನಪ್ರಕಾರ ಹಂಚಿಕೊಳ್ಳುವರು. ಈ ಯೇರ್ಪಾಡು ಬಹಳ ಲಾಭಕರವಾದುದು.

ವ್ಯವಸಾಯ ಕೈಗಾರಿಕೆ ಮೊದಲಾದುವುಗಳಲ್ಲಿ ಯಂತ್ರಗಳನ್ನುಪಯೋಗಿಸಿ ಸಾವಿರಾರು ಜನರು ಮಾಡತಕ್ಕ ಕೆಲಸಗಳನ್ನು ಅವುಗಳಿಂದ ಸುಲಭವಾಗಿ ಮಾಡಿಸುವರು. ಆದರೆ ಅಂಥ ಯಂತ್ರಗಳನ್ನು ಕೊಂಡುಕೊಳ್ಳುವುದಕ್ಕೆ ಪ್ರಥಮತಃ ಬಹುದ್ರವ್ಯವು ವಿಯೋಗಿಸಲ್ಪಡಬೇಕು. ಇಷ್ಟು ದ್ರವ್ಯವನ್ನು ಒಬ್ಬರೇ ವಿನಯೋಗಿಸಬೇಕಾದರೆ ಅಸಾಧ್ಯವಾಗುವುದು. ಬಡವರಾದರೂ ಅನೇಕರು ಷೇರುಗಳನ್ನು ಹಾಕಿ ಇಂಥ ಭಾರೀಕೆಲಸಗಳಿಗೆ ತಕ್ಕ ಏರ್ಪಾಟುಗಳನ್ನು ಮಾಡಿಕೊಂಡರೆ ತಮ್ಮ ಹಣಕ್ಕೆ ಲಾಭಬಂದು

ತನಗೆ ಜೀವನವಾಗಿ ಯಂತ್ರಗಳನ್ನು ನಡೆಸತಕ್ಕ ಮತ್ತು ಇವುಗಳನ್ನು ಮಾಡತಕ್ಕ ಕಾರಖಾನೆಗಳಲ್ಲಿ ಕೆಲಸಕ್ಕೆ ಬರುವ ಲಕ್ಷಾಂತರಜನಗಳಿಗೆ ಜೀವನವುಂಟಾಗುವದಲ್ಲದೆ ಈ ಕೆಲಸಗಳಿಂದ ಉತ್ಪತ್ತಿಯು ಹೆಚ್ಚಿ ಪ್ರಜೆಗಳಿಗೂ ಪಾಲುದಾರರಿಗೂ ಸರ್ಕಾರಕ್ಕೂ ಅನೇಕಮುಖವಾಗಿ ಲಾಭಗಳುಂಟಾಗುವುವು. ನಾಗರಿಕತೆಯುಳ್ಳ ಅನೇಕದೇಶಗಳಲ್ಲಿ ಕೂಲಿಯವರು ಕೂಡ ತಾವು ಸಂಪಾದಿಸತಕ್ಕ ಕೂಲಿಯಲ್ಲಿ ಒಂದು ಭಾಗವನ್ನು ಸೇವಿಂಗ್ಸ್ ಬ್ಯಾಂಕು ಮೊದಲಾದುವುಗಳಲ್ಲಿಡುತ್ತಾ ದಿನಕ್ರಮೇಣ ಸ್ವಲ್ಪಸ್ವಲ್ಪ ಬಂಡವಾಳವನ್ನು ಮಾಡಿಕೊಂಡು ಅನೇಕರು ಸೇರಿಕೊಂಡು ತಮ್ಮ ಬಂಡವಾಳವನ್ನೆಲ್ಲಾ ಯಾವುದಾದರೂ ಒಂದು ಲಾಭಕರವಾದ ಕೆಲಸದಲ್ಲಿ ವಿನಿಯೋಗಿಸಿ ತಾವೂ ಆ ಕೆಲಸದಲ್ಲಿ ವ್ಯವಸಾಯವನ್ನು ಮಾಡಿ ತಮ್ಮ ಹಣಕ್ಕೆ ಬಡ್ಡಿಯನ್ನೂ ತಾವು ಮಾಡಿದ ವ್ಯವಸಾಯಕ್ಕೆ ಸಂಬಳವನ್ನೂ ಆರ್ಜಿಸುತ್ತಾ ನಿರ್ಗತಿಕರಾಗಿದ್ದವರು ಧನಿಕರಾಗುತ್ತಲಿದ್ದಾರೆ. ವೃದ್ಧಿಗೆ ಬರುವವರೆಲ್ಲರೂ ಈರೀತಿಯಲ್ಲಿ ಪ್ರವರ್ತಿಸಿ ದರಿದ್ರಾವಸ್ಥೆಯಿಂದ ವಿಮುಕ್ತರಾಗತಕ್ಕ ಪಾಲುಗಾರಿಕೆ ಕೆಲಸಗಳನ್ನು ಅವಲಂಬಿಸಿ ವಂಚನೆಮೊದಲಾದುವುಗಳನ್ನು ಬಿಟ್ಟಲ್ಲಿ ವೃದ್ಧಿಗೆ ಬರುವುದರಲ್ಲಿ ಸಂಶಯವಿಲ್ಲ.



## ಅಭ್ಯಾಸ.

ಅಭ್ಯಾಸಾನುಸರೀ ವಿದ್ಯಾ ನೃಣಾಂ ಭವತಿ ಸರ್ವದಾ |
ತಸ್ಮಾದ್ವೃದ್ಧಿಂ ಪುಮಾಸಿಚ್ಛನ್ ನಿತ್ಯಮಭ್ಯಾಸಮಾಚರೇತ್ ||

ಯಾವ ವೃತ್ತಿಯಲ್ಲಿ ಪ್ರವೀಣತೆಯುಂಟಾಗಬೇಕಾದರೂ ಅಭ್ಯಾಸವು ಅತ್ಯಾವಶ್ಯಕವಾಗಿ ಆಗಬೇಕು. ಯಾವ ವೃತ್ತಿಯಲ್ಲೇ ಆಗಲಿ ಅಭ್ಯಾಸವಿಲ್ಲದೆ ಒಂದೇಸಲ ಪಾಂಡಿತ್ಯವುಂಟಾಗುವುದಿಲ್ಲ. ಕೆಲಸಗಳಲ್ಲಿ ಅಭ್ಯಾಸಮಾಡುತ್ತಾ

ತಪ್ಪುಗಳನ್ನು ತಿದ್ದಿಕೊಳ್ಳುತ್ತಿದ್ದರೆ ಕ್ರಮೇಣ ಅವುಗಳನ್ನು ಚೆನ್ನಾಗಿ ಮಾಡತಕ್ಕ ಯೋಗ್ಯತೆಯು ಬರುವುದು. ಓದು ಬರಹ ಲೆಕ್ಕಾಚಾರಗಳು ಬಂದಿದ್ದರೂ, ಸರ್ಕಾರಿ ಸಾಹುಕಾರಿ ಕೆಲಸಗಳಲ್ಲಿ ಅಭ್ಯಾಸವೂ ಅನುಭವವೂ ಆದಹೊರತು ಅವುಗಳನ್ನು ಸಮರ್ಪಕವಾಗಿ ಮಾಡತಕ್ಕ ಶಕ್ತಿಯುಂಟಾಗುವುದಿಲ್ಲ. ಕೃಷಿ ವಾಣಿಜ್ಯಾದಿ ವೃತ್ತಿಗಳಲ್ಲಿ ನಷ್ಟವಾಗದಿರಬೇಕಾದರೆ ಅವುಗಳ ಮರ್ಮವು ಅಭ್ಯಾಸಮೂಲಕವಾಗಿ ಗೊತ್ತಾಗಬೇಕು. ಹೀಗೆ ಗೊತ್ತಾಗುವುದಕ್ಕೋಸ್ಕರ ಪಾಶ್ಚಾತ್ಯರು ತಮ್ಮ ಮಕ್ಕಳಿಗೆ ಪ್ರಥಮತಃ ಹದಿನಾಲ್ಕು ವರುಷಗಳವರೆಗೂ ಓದು ಬರಹ ಲೆಕ್ಕಾಚಾರಗಳನ್ನು ಕಲಿಸಿ ಅನಂತರ ಅವರಿಗೆ ಯಾವ ವೃತ್ತಿಯಲ್ಲಿ ಬುದ್ಧಿಯೋಡುವುದೋ ಅದನ್ನು ಗೊತ್ತುಮಾಡಿಕೊಂಡು ಅಂಥ ವೃತ್ತಿಯಲ್ಲಿ ಪಾಂಡಿತ್ಯವುಳ್ಳವರ ಬಳಿ ಕೆಲಸವನ್ನು ಕಲಿತುಕೊಳ್ಳುವುದಕ್ಕೋಸ್ಕರ ದ್ರವ್ಯವನ್ನು ಕೊಟ್ಟು ಉಮೇದುವಾರರನ್ನಾಗಿ ಇಡುವರು. ಇವರು ಕೆಲವುವರುಷ ತಾವು ಕಲಿತುಕೊಳ್ಳಬೇಕೆಂದಿರುವ ವೃತ್ತಿಯ ಮರ್ಮಗಳನ್ನು ಚೆನ್ನಾಗಿ ತಿಳಿದುಕೊಂಡು ಯೋಗ್ಯತೆಯನ್ನು ಸಂಪಾದಿಸಿ ಯೋಗ್ಯತಾಪತ್ರಿಕೆಯನ್ನು ಪಡೆದು ಆಮೇಲೆ ಸ್ವತಂತ್ರವಾಗಿ ಜೀವಿಸುವುದಕ್ಕೆ ಉಪಕ್ರಮಿಸುವರು. ಇಂಥ ಏರ್ಪಾಡು ನಮ್ಮ ದೇಶದಲ್ಲಿ ಸಮಗ್ರವಾಗಿ ಇಲ್ಲದಿರುವುದರಿಂದ ನಾವು ಪಾಶ್ಚಾತ್ಯರಂತೆ ಒಳ್ಳೆಯಸ್ಥಿತಿಗೆ ಬರುವುದಕ್ಕೆ ಅವಕಾಶವಿಲ್ಲವಾಗಿದೆ ಆದುದರಿಂದ ನಮ್ಮ ದೇಶೀಯರೂ ಪ್ರಥಮತಃ ವಿದ್ಯಾಭ್ಯಾಸವನ್ನು ಮಾಡಿ ಅನಂತರ ನಮಗೆ ಯಾವುದರಲ್ಲಿ ಆಸಕ್ತಿಯಿರುವುದೋ ಅಂಥ ವೃತ್ತಿಯನ್ನು ಅವಲಂಬಿಸಿ ಆ ವೃತ್ತಿಯಲ್ಲಿ ಪ್ರವೀಣರಾದವರಬಳಿ ಉಮೇದುವಾರರಾಗಿದ್ದುಕೊಂಡು ಅವುಗಳನ್ನು ಅಭ್ಯಾಸಮಾಡಿ ಪಾಂಡಿತ್ಯವನ್ನು ಹೊಂದಿದರೆ ಆಯಾ ವೃತ್ತಿಗಳನ್ನು ಲಾಭಕರವಾಗುವಂತೆ ಮಾಡುವ ಯೋಗ್ಯತೆಯುಂಟಾಗುವುದು



# ಅತ್ರ್ಯಾಶೆ.

ಆಶಯಾ ಬಧ್ಯತೇ ಜನ್ತುಃ ಆಶಾ ಪ್ರಾಣಾನ್ ವ್ಯಪೋಹತಿ |
ಆಶಾ ದುಃಖಕರೀ ನಿತ್ಯಂ ತಸ್ಮಾದಾಶಾಂ ಪರಿತ್ಯಜೇತ್ ||

ಲೋಕದಲ್ಲಿ ಜನರಿಗೆ ಅನೇಕವಿಷಯಗಳಲ್ಲಿ ಆಶೆಯಿರುವುದು. ಆಶೆಯಿಲ್ಲ ದಿದ್ದವರು ಯಾವ ಕೆಲಸವನ್ನೂ ಮಾಡಲಾರರು. ಅತ್ಯಾಶೆಯು ಒಳ್ಳೆಯದಲ್ಲ, ವಿದ್ಯೆಯನ್ನೂ ಕೈಗಾರಿಕೆ ಕೆಲಸಗಳನ್ನೂ ಕಲಿತುಕೊಳ್ಳುವುದರಲ್ಲಿಯೂ ಧನ ವನ್ನಾರ್ಜಿಸುವುದರಲ್ಲಿಯೂ ಆಶೆಯು ಅತ್ಯಾವಶ್ಯಕವಾಗಿರಬೇಕು. ದ್ರವ್ಯ ವನ್ನು ಸಂಪಾದಿಸುವುದರಲ್ಲಿ ಅತ್ಯಾಶೆಪಡದೆ ಅವಿಚ್ಛಿನ್ನವಾಗಿ ಕೆಲಸಮಾಡುತ್ತ ಸ್ವಲ್ಪಸ್ವಲ್ಪ ಲಾಭವನ್ನು ಹೊಂದತಕ್ಕವರುಕೂಡ ಕ್ರಮೇಣ ಭಾಗ್ಯವಂತ ರಾಗುತ್ತಾರೆ. ಅತ್ಯಾಶೆಯಿಂದ ಒಂದೇಸಲ ಹಣಗಾರರಾಗಬೇಕೆಂದು ಪ್ರಯತ್ನ ಪಡುವವರಿಗೆ ಇದ್ದ ಸಂಪತ್ತಿಗೂ ನೈಶ್ಚಿಂತ್ಯಕ್ಕೂ ನ್ಯೂನತೆಯುಂಟಾಗುವು ದುಂಟು. ಇದಕ್ಕೆ ಅನೇಕದೃಷ್ಟಾಂತಗಳವೆ.

ಬ್ರಾಹ್ಮಣಾರ್ಥಭೋಜನಮಾಡಿ ಮನೆಗೆ ಬಂದು ತಲೆಯಲ್ಲಿ ಸಿಕ್ಕಿದ ಒಂದು ಎಳ್ಳುಕಾಳನ್ನು ಹಿಡಿದುಕೊಂಡು ಅದನ್ನು ಬಿತ್ತಿ ಅದರಿಂದ ಬಂದ ಎಳ್ಳನ್ನು ತೆಗೆದುಕೊಂಡು ಮತ್ತೆ ಬಿತ್ತಿ ಅದರಲ್ಲಿ ಬಂದುದನ್ನು ಪುನಃ ಬಿತ್ತಿ ಬೆಳೆಯುತ್ತಾ ಲಕ್ಷಾಂತರಖಂಡುಗಗಳನ್ನು ಬೆಳೆದು ಅವುಗಳನ್ನೆಲ್ಲಾ ವಿಕ್ರ ಯಿಸಿ ಐಶ್ವರ್ಯವಂತನಾಗುತೇನೆಂದು ಯೋಚಿಸಿ ಭಗ್ನಮನೋರಥನಾದ ಬ್ರಾಹ್ಮಣನ ಕಥೆಯೂ, ಒಂದು ಗಡಿಗೆ ರಾಗೀಹಿಟ್ಟನ್ನು ತಿರಿದು ಸಂಪಾದಿಸಿ ಕೊಂಡು ಮನೆಗೆ ಬರುತ್ತಿರುವಾಗ ಆಯಾಸದಿಂದ ಮಾರ್ಗದಲ್ಲಿ ಒಂದು ಮನೆಯಬೀದಿಯ ಜಗುಲಿಯಮೇಲೆ ಕುಳಿತುಕೊಂಡು ' ಈ ರಾಗೀಹಿಟ್ಟನ್ನು ಮಾರಿದರೆ ಒಂದು ಹಣವು ಬರುತ್ತದೆ. ಇದಕ್ಕೆ ಒಂದು ಕುರೀಮರಿಯನ್ನು ತೆಗೆದುಕೊಂಡು ಸಾಕಿದರೆ ಅದರಿಂದ ಏಳೆಂಟು ಮರಿಗಳಾಗುತ್ತವೆ. ಅವು

ಗಳನ್ನು ಸಾಕುತಬಂದರೆ ಐವತ್ತರುವತ್ತು ಕುರಿಗಳವರೆಗೆ ಆಗುತ್ತವೆ ಹಾಗೆ ಯೇ ಅವುಗಳನ್ನೂ ಸಾಕುತಹೋದರೆ ಕ್ರಮೇಣ ಅನೇಕ ಮಂದೆಗಳಾಗುತ್ತವೆ. ಆಗ ನಾನು ನಮ್ಮ ಜನರಲ್ಲಿ ದೊಡ್ಡ ಗೌಡನಾಗುತ್ತೇನೆ. ಅವುಗಳ ತುಪ್ಪುಟದಿಂದ ಕಂಬಳ ಜಾಡಿ ಮೊದಲಾದುವುಗಳನ್ನುಮಾಡಿ ಮಾರುವುದರಲ್ಲಿ ನನಗೆ ವರ್ಷಕ್ಕೆ ಸಾವಿರಾರುರೂಪಾಯಿಗಳು ಬರುತ್ತವೆ. ಆ ಹಣದಿಂದ ನಾನು ವಾಸಮಾಡುವುದಕ್ಕೆ ಸೊಗಸಾದ ತೊಟ್ಟೀಮನೆಯನ್ನೂ ಕುರಿಗಳನ್ನು ಕೂಡುವುದಕ್ಕೆ ದೊಡ್ಡದಾದ ಕೊಟ್ಟಿಗೆಗಳನ್ನೂ ಕಟ್ಟಿಸುತ್ತೇನೆ. ಆಮೇಲೆ ಚೆಂದುಳ್ಳ ಹೆಂಗಸನ್ನು ಮದುವೆಮಾಡಿಕೊಂಡು ಅವಳಿಗೆ ತುಂಬಾ ಸಲಿಗೆ ಯನ್ನು ಕೊಡದೆ ಇರುತ್ತೇನೆ. ಅವಳೇನಾದರೂ ನನ್ನ ಮಾತಿಗೆ ಎದುರುತ್ತರ ಕೊಟ್ಟರೆ ಹೀಗೆ ಬಡೆಯುತ್ತೇನೆ! 'ಎಂದು! ಸಿಟ್ಟಿಯವಾಗಿ ಹೆಂಡತಿಯನ್ನು ಬಡೆಯುವವನಹಾಗೆ ಕಾಲನ್ನು ಝಾಡಿಸಲಾಗಿ ರಾಗೀಹಿಟ್ಟಿನ ಗಡಿಗೆಗೆ ತಗುಲಿ ಗಡಿಗೆಯು ಒಡೆದು ಹಿಟ್ಟು ಮಣ್ಣಿನಲ್ಲಿ ಕಲೆತುಹೋಗಿ ಇಷ್ಟಾರ್ಥವು ಕೈಗೂಡಲಿಲ್ಲವೆಂದು ವ್ಯಥೆಪಟ್ಟ ಕುರುಬನ ಕಥೆಯೂ, ಜೀವನಾರ್ಥವಾಗಿ ದಿನಕ್ಕೆ ಮೂರು ನಾಲ್ಕು ಸೇರು ಹಾಲುಕೊಡುತಿದ್ದ ಎಮ್ಮೆಯನ್ನು ನೋಡಿ 'ಇದು ಬಹಳ ಗಾತ್ರವಾಗಿದೆ, ಇದರ ಶರೀರವೆಲ್ಲಾ ಹಾಲಿನಮಯವಾಗಿರಬೇಕು, ಇದು ನಿತ್ಯವೂ ಕೊಡತಕ್ಕ ಮೂರು ನಾಲ್ಕು ಸೇರು ಹಾಲಿನಿಂದ ನಾನು ಉಪಪನ್ನನಾಗುವುದಿಲ್ಲ, ಇದರ ಕೆಚ್ಚಲನ್ನು ಕೊಯ್ದು ಒಳಗಿರತಕ್ಕ ಹಾಲನ್ನೆಲ್ಲಾ ಬಂದೇಸಲ ತುಂಬಿಕೊಂಡು ಮಾರಿ ಧನಿಕನಾಗುವೆನು!' ಎಂದು ಕೆಚ್ಚಲನ್ನು ಕೊಯ್ದು ಒಳಗೆ ರಕ್ತಮಾಂಸಗಳನ್ನುಮಾತ್ರ ನೋಡಿ ತಾನು ನೆನೆಸಿದಂತೆ ಹಾಲನ್ನು ಕಾಣದೆ, ಇದ್ದುದಕ್ಕೂ ಮೋಸಬಂದು ಜೀವನೋಪಾಯ ತಪ್ಪಿತಲ್ಲಾ ಎಂಬುದಾಗಿ ದುಃಖಿಸಿದ ಬೆಪ್ಪುತಕ್ಕಡಿಗನಾದ ಕಮಾಡಿಗನ ಕಥೆಯೂ ದೃಷ್ಟಾಂತವಾಗಿವೆ. ಜನರು ಇವುಗಳನ್ನೆಲ್ಲಾ ಪರ್ಯಾಲೋಚಿಸಿ ಆತ್ಮಾಶೆಗೆ ಅಧೀನರಾಗದೆ ಲೌಕಿಕಸುಖ ಸಾಧಕಗಳಾದ ದ್ರವ್ಯ

ಮೊದಲಾದುವುಗಳ ಆರ್ಜನೆಯಲ್ಲಿ ತನ್ನ ಶಕ್ತಿಗೂ ಸಂದರ್ಭಗಳಿಗೂ ಅನು ರೂಪವಾಗಿ ಸತ್ಯವನ್ನು ಬಿಡದೆ ಸಾಹಸಮಾಡಿ ಇಹಪರಗಳನ್ನು ಸಾಧಿಸಿ ಕೊಳ್ಳಬೇಕು.



## ಪರೋಪಕಾರ.

ಧನಾನಿ ಜೀವಿತಂ ಚೈವ ಪರಾರ್ಥೇ ಪ್ರಾಜ್ಞ ಉತ್ಸೃಜೇತ್ |
ಸನ್ನಿಮಿತ್ತೇ ವರಂ ತ್ಯಾಗೊ ವಿನಾಶೇ ನಿಯತೇ ಸತಿ ||
ಪರೋಪಕಾರಾಯ ದುಹನ್ತಿ ಗಾವಃ ಪರೋಪಕಾರಾಯ ಫಲನ್ತಿ ವೃಕ್ಷಾಃ |
ಪರೋಪಕಾರಾಯ ವಹನ್ತಿ ನದ್ಯಃ ಪರೋಪಕಾರಾರ್ಥಮಿದಂ ಶರೀರಂ ||

ಪರೋಪಕಾರವು ಇಹಪರಸಾಧನೆಗಳಿಗೆ ಕಾರಣಭೂತವಾದದ್ದು. ಸೂರ್ಯಚಂದ್ರಾದಿಗ್ರಹಗಳು ಅಪ್ರಾರ್ಥಿತವಾಗಿ ಚರಾಚರಾತ್ಮಕವಾದ ಈ ಪ್ರಪಂಚಕ್ಕೆ ಸಂತೋಷವನ್ನುಂಟುಮಾಡುತ್ತವೆ. ಮೇಘವು ಇದೇರೀತಿ ಯಲ್ಲಿ ವರ್ಷಿಸಿ ಜಗತ್ತನ್ನೆಲ್ಲಾ ಸಂತೋಷಪಡಿಸುತ್ತದೆ. ಇದೇಪ್ರಕಾರ ಪರೋಪಕಾರಿಗಳು ನಿಸರ್ಗವಾಗಿ ಪರಹಿತಾಯತ್ತಚಿತ್ತರಾಗಿರುತ್ತಾರೆ. ಪರೋಪಕಾರವು ದ್ರವ್ಯಾರ್ಜನೆಗೂ ಸಹಕಾರಿಯಾದದ್ದು. ಇದಕ್ಕೆ ಅನೇಕ ದೃಷ್ಟಾಂತಗಳಿವೆ.

ಹದಿನೆಂಟನೆಯ ಶತಮಾನದ ಕೊನೆಯಲ್ಲಿ ಫ್ರಾನ್ಸ್‌ದೇಶದಲ್ಲಿ ರಾಜ್ಯ ಭಾರವು ವ್ಯತ್ಯಸ್ತವಾಯಿತು. ಜನರು ರಾಜಧಾನಿಯಾದ ಪ್ಯಾರಿಸ್‌ಪಟ್ಟಣಕ್ಕೆ ನುಗ್ಗಿ ಚಕ್ರವರ್ತಿಯಮೇಲೆ ತಿರುಗಿಬಿದ್ದು ಚಕ್ರವರ್ತಿನೀ ಚಕ್ರವರ್ತಿಗ ಳನ್ನು ಗಲ್ಲಿಗೆಹಾಕಿ ದೊಡ್ಡಮನುಷ್ಯರ ಮನೆಗಳಿಗೆಲ್ಲಾ ನುಗ್ಗಿ ಲೂಟಿಮಾಡು ತ್ತಿದ್ದರು. ಆ ಪಟ್ಟಣದಲ್ಲಿ ಅಸ್ಮಾದೃಶವಾದ ಪರೋಪಕಾರಿಯೊಬ್ಬನಿದ್ದನು. ಇವನೂ ಧನಿಕನಾಗಿದ್ದನು. ಪ್ರಜೆಗಳೆಲ್ಲರೂ ಅಧಿಕಾರಿಗಳನ್ನೂ ಹಣಗಾರ

ರನ್ನೂ ಕೊಂದು ಲೂಟಿಮಾಡುತಿರುವಾಗ ಆ ಪರೋಪಕಾರಿಯು ಜನರಿಗೆ ನನ್ನಲ್ಲಿ ನಿಜವಾಗಿ ನಂಬುಗೆಯಿರುವುದನ್ನು ಪರೀಕ್ಷಿಸುವುದಕ್ಕೆ ಈಗ ಸರಿಯಾದ ಕಾಲವೆಂದು ತಿಳಿದು ತನ್ನ ಮನೆಯಲ್ಲಿದ್ದ ಧನ ಕನಕ ವಸ್ತ್ರಾಭರಣಗಳನ್ನೆಲ್ಲಾ ಕಂಪೌಂಡಿನೊಳಗೆ ಇಟ್ಟು ತಾನು ಒಂದು ಕೊಟಡಿಯಲ್ಲಿ ಕುಳಿತುಕೊಂಡು ನೋಡುತಿದ್ದನು. ಆ ಸಮಯದಲ್ಲಿ ಲೂಟಿಗಾರರು ಇವನ ಮನೆಗೆ ಲೂಟಿಗೋಸ್ಕರ ಯಾರೂ ಪ್ರವೇಶಿಸಕೂಡದೆಂದು ಮನೆಯಬಾಗಿಲಿಗೆ ನೋಟೀಸನ್ನು ಹತ್ತಿಸಿದ್ದಲ್ಲದೆ ತಾವು ಲೂಟಿಮಾಡಿಕೊಂಡು ತಂದ ಪದಾರ್ಥಗಳಲ್ಲಿ ಪ್ರತಿಯೊಬ್ಬರೂ ಒಂದೊಂದುಭಾಗವನ್ನು ಈತನ ಕಂಪೌಂಡಿನೊಳಕ್ಕೆ ಬಿಸಾಡಿಹೋಗುತ್ತಿದ್ದರು. ಆತನಿಗೆ ಇದರಿಂದ ಅನೇಕಕೋಟಿ ದ್ರವ್ಯವು ಲಭ್ಯವಾಯಿತು ಆಮೇಲೆ ಆತನ ಪರೋಪಕಾರ ಬುದ್ಧಿಯು ಇನ್ನೂ ಶತಾಂಶವಾಗಿ ಹೆಚ್ಚಿತು

ಲೋಕದಲ್ಲಿ ಎಲ್ಲರೂ ಪ್ರಾಯಶಃ ಸ್ವಕಾರ್ಯಧುರಂಧರರಾಗಿರುವರು. ಆದರೂ ಉಪಕಾರಮಾಡಿದವನ ವಿಷಯದಲ್ಲಿ ಕೃತಜ್ಞತೆಯೂ ವಿಶ್ವಾಸವೂ ಸಾಮಾನ್ಯವಾಗಿ ಜನರಿಗೆ ನಿಸರ್ಗಸಿದ್ಧವಾದ ಗುಣವಾಗಿರುವುವು. ಉಪಕಾರಮಾಡಿದವರಿಗೆ ಪ್ರತ್ಯುಪಕಾರಮಾಡಿ ಕೃತಕೃತ್ಯರಾಗಬೇಕೆಂಬ ಇಷ್ಟವೂ ಕೂಡ ಜನರಿಗೆ ಸ್ವಭಾವಸಿದ್ಧವಾಗಿರಬೇಕಾದುದು. ಮಾಡಿದ ಉಪಕಾರವನ್ನು ಸ್ಮರಿಸುತ್ತ ಶ್ಲಾಘಿಸುವುದೂ ಕೂಡ ಜನರಲ್ಲಿ ವಾಡಿಕೆಯಾಗಿದೆ. ಈ ಕಾರಣಗಳಿಂದ ಪರೋಪಕಾರಿಯನ್ನು ಬಹುಜನರು ಕೊಂಡಾಡುವರು. ಇದೇ ಅವನಿಗೆ ಹೆಚ್ಚಾಗಿ ಒಳ್ಳೆಯಕೆಲಸಗಳನ್ನು ಮಾಡುವುದಕ್ಕೆ ಪ್ರೋತ್ಸಾಹಕಾರಿಯಾಗಿ ಪರಿಣಮಿಸುವುದು. ಇದರ ಸಹಾಯದಿಂದ ವಿಶೇಷವಾಗಿ ಪರೋಪಕಾರ ಮಾಡುವುದಕ್ಕೆ ಅವಕಾಶವುಂಟಾಗುವುದಲ್ಲದೆ ವಿಶೇಷ ದ್ರವ್ಯಾರ್ಜನೆಗೂ ಅವಕಾಶವುಂಟಾಗುವುದು. ಪರಮಲೋಭಿಗಳೂ ಕೂಡ ಪರೋಪಕಾರಿಗೆ ಸಹಾಯಮಾಡುವರು.

೧೭೮೦ನೆಯ ವರುಷದಲ್ಲಿ ಉತ್ತರಅಮೆರಿಕಾಖಂಡದ ಸಂಯುಕ್ತಸಂಸ್ಥಾನವೆಂಬ ದೇಶದಲ್ಲಿ ವಾಷಿಂಗ್‌ಟನ್ ಎಂಬ ಒಬ್ಬ ದೊಡ್ಡಮನುಷ್ಯನಿದ್ದನು. ಆಗ ಆ ದೇಶೀಯರಿಗೂ ಇಂಗ್ಲೀಷರಿಗೂ ಯುದ್ಧವು ಸಂಭವಿಸಿತು. ಇಂಗ್ಲೀಷರು ಆ ದೇಶವನ್ನು ಸ್ವಾಧೀನಮಾಡಿಕೊಳ್ಳಬೇಕೆಂದು ಎಂಟುವರುಷಗಳವರೆಗೂ ಯುದ್ಧವನ್ನು ಮಾಡಿದರು. ಆ ಯುದ್ಧದಲ್ಲಿ ಅವನು ಅನ್ಯಾದೃಶವಾದ ಪರಾಕ್ರಮವನ್ನೂ ಪರೋಪಕಾರವನ್ನೂ ಕಾರ್ಯತಃ ತೋರಿಸಿ ತನ್ನ ದೇಶಕ್ಕೆ ಸ್ವಾತಂತ್ರ್ಯವುಂಟಾಗತಕ್ಕ ಪ್ರಯತ್ನದಲ್ಲಿ ನಿರತನಾಗಿದ್ದನು ಕೊನೆಗೆ ಯುದ್ಧಮಾಡುವುದಕ್ಕೆ ದ್ರವ್ಯಸಹಾಯವು ಇಲ್ಲದೆ ಹೋಯಿತು. ಮದ್ದು ಗುಂಡು ಮೊದಲಾದುವುಗಳಿಗೂ ಅಭಾವವಾಯ್ತು. ಸೈನಿಕರಿಗೆ ಅಶನವಸನಗಳಿಗೂ ಮಾರ್ಗವಿಲ್ಲವಾಯ್ತು. ಈ ತೊಂದರೆಗಳನ್ನೆಲ್ಲಾ ನೋಡಿ ಮುಂದೆ ಸಂಭವಿಸುವ ವಿಪತ್ತುಗಳನ್ನು ಅನುಭವಿಸುವುದಕ್ಕಿಂತ ಆತ್ಮಹತ್ಯೆ ಮಾಡಿಕೊಳ್ಳುವುದುತ್ತಮವೆಂದು ಅವನು ಯೋಚಿಸುತ್ತಿದ್ದನು. ಆಗ ಆ ಪಟ್ಟಣದಲ್ಲಿ ಮರೆ ಎಂಬ ಕೋಟೀಶ್ವರನಾದ ವರ್ತಕನಿದ್ದನು. ಅವನು ಜನ್ಮಾರಭ್ಯ ಪರೋಪಕಾರವೆಂಬ ಮಾತನ್ನೇ ಕೇಳಿದವನಲ್ಲ: ಮತ್ತು ಲುಬ್ಧಾಗ್ರೇಸರಚಕ್ರವರ್ತಿ ಎಂಬ ಬಿರುದನ್ನೂ ಸಂಪಾದಿಸಿದ್ದನು. ಇಂತಹ ಮನುಷ್ಯನು ವಾಷಿಂಗ್‌ಟನ್ನಿನ ನಿಸ್ಪೃಹತೆಯನ್ನೂ ದೇಶಾಭಿಮಾನವನ್ನೂ ಪರೋಪಕಾರಬುದ್ಧಿಯನ್ನೂ ತನ್ನ ದೇಶಕ್ಕೆ ಸನ್ನಿಹಿತವಾದ ದುರ್ದಶೆಯನ್ನೂ ನೋಡಿ, ದಯಾರ್ದ್ರಹೃದಯನಾಗಿ ವಾಷಿಂಗ್‌ಟನ್ನನನ್ನು ಕರೆಯಿಸಿ ತನ್ನ ಆಸ್ತಿಯನ್ನೆಲ್ಲಾ ಅವನಿಗೆ ಕೊಟ್ಟು ಪ್ರೋತ್ಸಾಹಪಡಿಸಿದನು. ಇದರಿಂದ ವಾಷಿಂಗ್‌ಟನ್ನನಿಗೆ ಜಯವಾಯಿತು. ಸಂಯುಕ್ತಸಂಸ್ಥಾನದ ಸ್ವಾತಂತ್ರ್ಯವು ಇಂಗ್ಲೀಷರಿಂದ ಒಪ್ಪಿಕೊಳ್ಳಲ್ಪಟ್ಟಿತು.

ಹೀಗೆ ಪರೋಪಕಾರಿಯಾಗಿಯೂ ಸನ್ಮಾರ್ಗಪ್ರವೃತ್ತನಾಗಿಯೂ ಇರತಕ್ಕವನಿಗೆ ಮಿತ್ರರುಮಾತ್ರವೇ ಅಲ್ಲದೆ ಇತರರೂ ಸಹಾಯಮಾಡುವರು.

ದುರ್ಮಾರ್ಗಪ್ರವೃತ್ತರಾದವರನ್ನು ಭ್ರಾತೃ ಮಿತ್ರ ಕಳತ್ರಾದಿಗಳೂಕೂಡ ಪರಿತ್ಯಜಿಸುವರು. ಅದುಕಾರಣ ಇಹಪರಸಾಧನೆಗಳನ್ನು ಮಾಡಿಕೊಳ್ಳಬೇಕೆಂಬ ತಾತ್ಪರ್ಯವುಳ್ಳವರು ಪರೋಪಕಾರಬುದ್ಧಿಯುಳ್ಳವರಾಗಿರಬೇಕು.

***

## ಇಹಪರ ಸಾಧನೆಗಳು.

---

ಧರ್ಮಂ ಚಾರ್ಥಂ ಚ ಕಾಮಂ ಚ ಸೇವೇತ ಪುರುಷರ್ಷಭಃ |
ಅವಿರೋಧೇನ ಸತತಂ ಯ ಇಚ್ಛೇದಾತ್ಮನೋ ಹಿತಂ ||
ಅರ್ಥಂ ಕಾಮಂ ಚ ಸೇವೇತ ಧರ್ಮಮೇವಾನುಸಂಸ್ಮರೇತ್ |
ಅರ್ಥಕಾಮೌ ಧರ್ಮಯುತೌ ಪರತ್ರೇಹ ಚ ಶರ್ಮಣೇ ||

ಈ ಪ್ರಪಂಚವು ಚೇತನಾಚೇತನಾತ್ಮಕವಾಗಿದೆ ಚೇತನಾತ್ಮಕವಾದುದರಲ್ಲಿ ಮನುಷ್ಯನಿಗೆ ಸಮಾನವಾದ ಪ್ರಾಣಿಗಳು ಯಾವುವೂ ಕಾಣಿಸುವುದಿಲ್ಲ. ಮನುಷ್ಯನು ದೇಹವನ್ನೂ ಮನಸ್ಸನ್ನೂ ಹೊಂದಿದವನಾಗಿರುತ್ತಾನೆ. ದೇಹವು ಪಂಚಭೂತಾತ್ಮಕವಾಗಿಯೂ ಪಂಚೇಂದ್ರಿಯಗಳುಳ್ಳದಾಗಿಯೂ ಇರುವುದು. ಜ್ಞಾನೇಂದ್ರಿಯವಾದ ಮನಸ್ಸು ದೇಹಕ್ಕೆ ಸಂಬಂಧಿಸಿಕೊಂಡಿದರೂ ಅದು ವಿಲಕ್ಷಣವಾಗಿದ್ದುಕೊಂಡಿರುವುದು. ಈಶ್ವರಸೃಷ್ಟಿಯಲ್ಲಿ ಮನುಷ್ಯನ ಮನಸ್ಸಿನಂತೆ ಅದ್ಭುತವಾದುದು ಯಾವುದೂ ಇಲ್ಲ. ಜ್ಞಾಪಕಶಕ್ತಿ, ಪೂರ್ವಾಪರಜ್ಞತೆ, ಯುಕ್ತಾಯುಕ್ತವಿವೇಚನೆ, ಇವೇ ಮೊದಲಾದುವುಗಳು ಮನಸ್ಸಿನಲ್ಲಿ ಅಡಕವಾದ ಶಕ್ತಿಗಳಾಗಿರುತ್ತವೆ. ಮನಸ್ಸು ನಾವು ಮಾಡತಕ್ಕ ಸಮಸ್ತ ಕೆಲಸಗಳಿಗೂ ಸಾಕ್ಷಿಯಾಗಿರುವುದು. ಇದು ಇಂದ್ರಿಯಗಳ ಇಷ್ಟಕ್ಕೆ ಅನುಸಾರವಾಗಿ ಕೆಲಸಮಾಡಿಸತಕ್ಕ ಅಧಿಕಾರವುಳ್ಳುದಾಗಿರುವುದು. ಚಿತ್ತವು ಅಧಿಕಾರಮಾಡುವುದರಲ್ಲಿ ಇಂದ್ರಿಯಗಳಿಗೆ ಹೇಗೆ ವಶವಾಗಿರುವುದೋ ಹಾಗೆಯೇ ತನ್ನಲ್ಲಿ ಅಂತರ್ಗತವಾಗಿರ

ತಕ್ಕ ಪೂರ್ವಾಪರಜ್ಞತೆಗೂ ಅಧೀನವಾಗಿರುವುದು. ಇಂದ್ರಿಯಗಳ ಮತ್ತು ಪೂರ್ವಾಪರಜ್ಞಾನದ ಪ್ರೇರಣೆಗೆ ಅನುಸಾರವಾಗಿ ನಿರಂತರವೂ ವ್ಯವಹಾರ ಗಳು ನಡೆಯುವುವು. ಇಂದ್ರಿಯಗಳು ಸನ್ಮಾರ್ಗದಲ್ಲಿ ಪ್ರವರ್ತಿಸುವಂತೆ ಮನಸ್ಸು ಪ್ರೇರಣೆಮಾಡಿದಾಗ ಪೂರ್ವಾಪರಜ್ಞಾನವು ಅವುಗಳಿಗೆ ಸಹಕಾರಿ ಯಾಗಿರುವುದು. ಮಾಡಬಾರದ ಕೆಲಸಗಳನ್ನು ಮಾಡಿಸುವುದರಲ್ಲಿ ಇಂದ್ರಿ ಯಗಳು ಮನಸ್ಸನ್ನು ಪ್ರೇರಿಸುವಾಗ ಪೂರ್ವಾಪರಜ್ಞತೆಯು ಪ್ರತಿಭಟಿಸಿ, ಆ ಕೆಲಸಗಳನ್ನು ಮಾಡುವುದರಿಂದ ಉಂಟಾಗಬಹುದಾದ ಅನರ್ಥಗಳನ್ನು ಸೂಚಿಸುವುದು. ಇಂದ್ರಿಯಗಳ ಶಕ್ತಿಯೇ ಬಲವಾದಪಕ್ಷದಲ್ಲಿ ಪೂರ್ವಾಪರ ಜ್ಞತೆಯು ದುರ್ಬಲವಾಗಿ ಕೊನೆಗೆ ನಾಶವಾಗುವುದು. ಯಾರ ಮನಸ್ಸು ಇಂದ್ರಿಯಪರವಶವಾಗಿ ಪೂರ್ವಾಪರಜ್ಞತೆಗೆ ಅಧೀನವಾಗದೆ ಉಚ್ಛೃಂಖಲ ವಾಗಿ ಪ್ರವರ್ತಿಸುವುದೋ ಅಂಥ ಜನರು ದುರ್ಮಾರ್ಗಪ್ರವೃತ್ತರಾಗಿ ಇಹ ಪರಗಳನ್ನು ಕಳೆದುಕೊಳ್ಳುವರು. ಇಹಪರಸಾಧನೆಗೆ ದ್ರವ್ಯವು ಸಾಧನ ಭೂತವಾದುದು. ಆದರೆ ಧರ್ಮದಿಂದ ಸಂಪಾದಿಸಿದ ದ್ರವ್ಯವು ಇಹಪರಗಳಿಗೆ ಸಾಧನವಾಗುವುದೇ ಹೊರತು ಅಧರ್ಮದಿಂದ ಸಂಪಾದಿಸಲ್ಪಟ್ಟ ದ್ರವ್ಯವು ಎಂದಿಗೂ ಸಾಧಕವಾಗುವುದಿಲ್ಲ. ಆದುದರಿಂದ ನಿರ್ದುಷ್ಟವಾದ ಇಹಪರ ಸೌಖ್ಯವನ್ನು ಅಪೇಕ್ಷಿಸತಕ್ಕವರು ಧರ್ಮದಿಂದ ಅರ್ಥವನ್ನೂ, ಅರ್ಥದಿಂದ ಇತರ ಪುರುಷಾರ್ಥಗಳನ್ನೂ ಸಂಪಾದಿಸಿ ಕೃತಕೃತ್ಯರಾಗಬೇಕು.



## ಅರ್ಥಾರ್ಜನೆಗೆ ಸಹಾಯಭೂತವಾದ ಬುದ್ಧಿವಾದಗಳು.

1. ಅರೋಗದೃಢಕಾಯರಾಗಿರುವುದಕ್ಕೆ ಸಹಾಯಭೂತಗಳಾದ ಆರೋಗ್ಯಸೂತ್ರಗಳ ನಿಬಂಧನೆಗಳನ್ನು ಅನುಸರಿಸಿ ನಡೆ.

2. ಲೋಕವ್ಯವಹಾರದ ನಡವಳಿಕೆಗೆ ಸಾಧಕವಾದ ಜ್ಞಾನವನ್ನು ಹೊಂದುವುದಕ್ಕೋಸ್ಕರ ಯಾವದಾದರೂ ಒಂದು ಭಾಷೆ ಮತ್ತು ಲೆಕ್ಕಾ

ಚಾರಗಳಲ್ಲಿ ಸಂಪೂರ್ಣ ಪಾಂಡಿತ್ಯವನ್ನೂ ಲೌಕಿಕ ವ್ಯವಹಾರಗಳಿಗೆ ಸಾಧಕವಾದ ಇತರ ಭಾಷೆಗಳಲ್ಲಿ ಸಾಮಾನ್ಯ ಪರಿಚಯವನ್ನೂ ಹೊಂದು.

3. ಯಾವದಾದರೂ ಒಂದು ವೃತ್ತಿಯಲ್ಲಿ ಸಂಪೂರ್ಣ ಪ್ರಜ್ಞೆಯನ್ನೂ ಇತರ ವೃತ್ತಿಗಳಲ್ಲಿ ಸಾಮಾನ್ಯವಾದ ತಿಳುವಳಿಕೆಯನ್ನೂ ಸಂಪಾದಿಸು.

4. ಯಾವ ಕೆಲಸವನ್ನುಪಕ್ರಮಿಸಬೇಕಾದರೂ ಹಿತಚಿಂತಕರಾಗಿಯೂ ತಿಳುವಳಿಕೆಯುಳ್ಳವರಾಗಿಯೂ ಇರುವವರಲ್ಲಿ ಅದನ್ನುಪಕ್ರಮಿಸುವುದರಿಂದುಂಟಾಗತಕ್ಕ ಲಾಭ ನಷ್ಟಗಳನ್ನು ಪ್ರಥಮತಃ ಚೆನ್ನಾಗಿ ಚರ್ಚಿಸಿ ಅನಂತರ ಅದರ ಪೂರ್ವಾಪರಗಳನ್ನು ನಿಧಾನವಾಗಿ ಯೋಚಿಸಿ ಲಾಭಕರವಾದುದೆಂದು ನಂಬಿಗೆಯುಂಟಾದಾಗ ಅದನ್ನುಪಕ್ರಮಿಸು.

5. ಉಪಕ್ರಮಿಸಿದುದನ್ನು ಶ್ರದ್ಧೆಯಿಂದಲೂ ಉತ್ಸಾಹದಿಂದಲೂ ಐಕಾಗ್ರ್ಯದಿಂದಲೂ ಮಾಡು.

6. ಉಪಕ್ರಮಿಸಿದ ಕೆಲಸವು ಕೆಟ್ಟುಹೋದರೆ ಹಾಗೆ ಕೆಡುವುದಕ್ಕುಂಟಾದ ಕಾರಣಗಳನ್ನು ಪರೀಕ್ಷಿಸಿ ಅದರ ನಿವಾರಣೆಗೆ ತಕ್ಕ ಏರ್ಪಾಡುಗಳನ್ನು ಮಾಡಿ ಮತ್ತೆ ಅದು ಫಲದಾಯಕವಾಗುವವರಿಗೂ ಬಿಡದೆ ಮಾಡುವುದರಲ್ಲಿ ಬದ್ಧಾದರನಾಗು.

7. ಬಾಲ್ಯದಲ್ಲಿ ವಿದ್ಯಾಭ್ಯಾಸದ ವಿಷಯದಲ್ಲಿಯೂ ಅರ್ಥಪ್ರದಗಳಾದ ವೃತ್ತಿಗಳನ್ನವಲಂಬಿಸತಕ್ಕ ವಿಷಯದಲ್ಲಿಯೂ ಉಂಟಾಗತಕ್ಕ ಕಾಯಕ್ಲೇಶ ಮನಃಕ್ಲೇಶಗಳಿಗೆ ಬೇಸರಪಡಬೇಡ.

8. ಬಾಲ್ಯಾರಭ್ಯ ಆಟಪಾಟಗಳಿಗೂ ನಿರರ್ಥಕವಾದ ಸಲ್ಲಾಪಗಳಿಗೂ ಮನಸ್ಸನ್ನು ಕೊಡದೆ ಅರ್ಥಾರ್ಜನೆಯನ್ನು ಮಾಡತಕ್ಕ ನ್ಯಾಯವಾದ ಕೆಲಸಗಳಲ್ಲಿ ಶ್ರದ್ಧೆಯುಳ್ಳವನಾಗಿರು.

9. ಅರ್ಥಾರ್ಜನೆಗೆ ಸಾಧಕವಾದ ವೃತ್ತಿಗಳಲ್ಲಿ ಸಾಧ್ಯವಾದುದನ್ನ
ವಲಂಬಿಸತಕ್ಕ ವ್ಯವಸಾಯವನ್ನು ಮಾಡು.

10. ಅನ್ಯಾಯಾರ್ಜಿತವಾದ ದ್ರವ್ಯವು ದಕ್ಕುವುದು ಕಷ್ಟವಾದುದ
ರಿಂದ ದುರಾಶೆಗೆ ಒಳಗಾಗದೆ, ಅನ್ಯಾಯಕ್ಕೆ ಪ್ರವರ್ತಿಸದೆ, ದ್ರವ್ಯಾರ್ಜನೆ
ಯನ್ನು ಮಾಡುವುದರಲ್ಲಿ ಪ್ರಾಮಾಣಿಕನಾಗಿರು.

11. ಹಿತೋಕ್ತಿ, ಮರ್ಯಾದೆ, ಪೂರ್ವಾಪರಜ್ಞತೆ, ಕ್ಲುಪ್ತವಾದ
ಕಾಲಗಳಲ್ಲಿ ಕೆಲಸಗಳನ್ನು ಮಾಡುವಿಕೆ, ಸಾಹಸ, ನಂಬಿಗೆ, ಪರೋಪಕ
ಪರಾಯಣತೆ, ದೇಶಾಟನ, ಲೌಕಿಕವ್ಯವಹಾರಜ್ಞರಲ್ಲಿ ಸಂಭಾಷಣೆ, ಸ
ರ್ಪಕವಾಗಿ ಲೆಕ್ಕಗಳನ್ನಿಡುವಿಕೆ, ಸತ್ಪುರುಷರ ಸಂಬಂಧ, ದುಷ್ಟಸಹವಾಸ
ಪರಿತ್ಯಾಗ, ಅರಿಷಡ್ವರ್ಗಗಳ ನಿಗ್ರಹ, ಜಾಗರೂಕತೆ, ವ್ಯಭಿಚಾರ ದ್ಯೂ
ಪಾನಗಳಲ್ಲಿ ಪರಾಙ್ಮುಖತೆ, ಮಿತವ್ಯಯ, ಯಶಸ್ಸಿನಲ್ಲಿ ಆಸಕ್ತಿ, ಭೂತ
ದಯೆ, ದೇವಭಕ್ತಿ ಮೊದಲಾದುವುಗಳು ಇಹಪರಸಾಧನೆಗಳಿಗೆ ಅತ್ಯಂತ
ಸಾಧಕವಾದುವುಗಳಾದುದರಿಂದ ಅವುಗಳನ್ನು ಆಚರಣೆಗೆ ತಂದುಕೊ

12. ಅವಲಂಬಿಸಿದ ಕೆಲಸಗಳಲ್ಲೆಲ್ಲಾ ಆದಾಯವ್ಯಯಗಳಲ್ಲಿ
ಯಾವುದನ್ನೂ ಬಿಡದೆ ಬರೆದು ನೋಡುತ್ತಿರು.

ಸಂಪೂರ್ಣ.

